# ಕೊಡಗು  ಸಂಗಾತಿ

ಮೇ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಪಗ್ಗು 18 ರಿಂದ 31, ಬೇಶ 1)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 9 ಪುಟಗಳು : 24 ಬೆಲೆ ರೂ. : 6-00





ಸುಳ್ಯದ ಕುರುಂಜಿ ಬಾಗ್‌ನಲ್ಲಿರುವ ಕೆ. ವಿ. ಜಿ. ಪಾಲಿಟೆಕ್ನಿಕ್
ಮತ್ತು ಕೆ. ವಿ. ಜಿ. ಲಾ ಕಾಲೇಜಿನ ಒಂದು ನೋಟ

## ಶಿಕ್ಷಣ ರಂಗದ ಧ್ರುವತಾರೆ ಶ್ರೀ ಕುರುಂಜಿ ವೆಂಕಟರಮಣಗೌಡರು



ಸಂಚಿಕೆ 4 ಸಂಪುಟ 8, ಪುಟ 2ರಲ್ಲಿ "ಮತ್ತು ಮಣಿಪಾಲದ ಸ್ಥಾಪನೆಗೆ ಬುನಾದಿಯಾಯಿತೆಂದು" ಎಂಬ ವಾಕ್ಯವು ತಪ್ಪಾಗಿ ಮುದ್ರಣಗೊಂಡಿದೆ, ಅದನ್ನು ಈ ಕೆಳಗಿನ ರೀತಿ ಓದಬೇಕಾಗಿ ವಿನಂತಿ. ಮುದ್ರಣ ದೋಷಕ್ಕೆ ವಿಷಾದಿಸುತ್ತೇವೆ.

-ಸಂಪಾದಕಿ

"ಶ್ರೀಯುತರು ಎಳೆವೆಯಲ್ಲಿಯೇ ಗಾಂಧೀಜಿಯವರನ್ನು ಕಂಡು ಅವರಿಂದ ಪ್ರಭಾವಿತರಾದರು. ಆ ಬಳಿಕ ವಿದ್ಯಾರ್ಥಿಯಾಗಿದ್ದಾಗ ವಿವೇಕಾನಂದರ ಜೀವನ ಇವರ ಮೇಲೆ ಗಾಢ ಪ್ರಭಾವ ಬೀರಿದೆ. ಬಸವಣ್ಣನವರ ವಿಚಾರಧಾರೆಗೆ ಇವರು ಮನಸೋತರು. ನೆಹರೂ ಅವರ ಸಮಾಜವಾದ ಇವರಿಗೆ ಇಷ್ಟವಾಗಿದೆ. ತಮ್ಮ ತಂದೆಯವರ ಮಾರ್ಗದರ್ಶನ ಮತ್ತು ಮಣಿಪಾಲದ ಜನಕ ಡಾ. ಟಿ. ಎಂ. ಎ. ಪೈಯವರ ಪ್ರೇರಣೆಯಿಂದ ವಿದ್ಯಾಸಂಸ್ಥೆಗಳ ಸ್ಥಾಪನೆಗೆ ಬುನಾದಿಯಾಯಿತೆಂದು ಅಂದಿನ ದಿನಗಳನ್ನು ಇವರು ನೆನೆಯುತ್ತಾರೆ."

## ಏಜೆಂಟರ ಮತ್ತು ಚಂದದಾರರ ಗಮನಕ್ಕೆ

ಇದೇ ದಿನಾಂಕ **8/5/2000** ರಿಂದ **21/5/2000** ರ ತನಕ ಸಂಗಾತಿಯ ಪತ್ರಿಕೆಯ ಗೌರವ ಸಂಪಾದಕ ಪಟ್ಟಡ ಪ್ರಭಾಕರನವರು ತಮ್ಮ ಸಿಬ್ಬಂದಿಯೊಂದಿಗೆ ಮಡಿಕೇರಿ ಕಛೇರಿಯಲ್ಲಿ ಲಭ್ಯರಿರುತ್ತಾರೆ. ಆದ್ದರಿಂದ ಸಂಗಾತಿಯ ಎಲ್ಲಾ ಏಜೆಂಟರುಗಳು ಅವರನ್ನು ಖುದ್ದು ಸಂಪರ್ಕಿಸುವುದು.

ನವೀಕರಣಗೊಳಿಸದೆ ಇರುವ ಚಂದದಾರರು ದಯವಿಟ್ಟು ತಪ್ಪದೆ ಈ ಸದವಕಾಶವನ್ನು ಸದುಪಯೋಗ ಪಡಿಸಿಕೊಳ್ಳಬೇಕೆಂಬುದಾಗಿ ಕೋರಿಕೆ.

- ಸಂಪಾದಕಿ

ಲಭ್ಯವಿರುವ ವಿಳಾಸ :

**C/o ಬೈತಡ್ಕ ಜಾನಕಿ,** 21-16, ವೆಬ್ಸ್ ಸೇತುವೆ ಎದುರು,
ರೇಸ್‌ಕೋರ್ಸ್ ರಸ್ತೆ, (ಎಲ್.ಐ.ಸಿ. ಹತ್ತಿರ), ಮಡಿಕೇರಿ. ✆ : 28047

## ಬೇಕಾಗಿಯೊಳೊ

ಕೊಡಗ್‌ಲಿ "ಸಂಗಾತಿ" ಪತ್ರಿಕೆಗೆ ಫೀಲ್ಡ್ ಮ್ಯಾನೇಜರ್, ವರದಿಗಾರ ಆಗಿ ಕೆಲ್ಸ ಮಾಡಿಕೆ ಒಬ್ಬ ವ್ಯಕ್ತಿ ಬೇಕಾಗಿತ್ತ್. ಕಮ್ಮಿಯೆಂದರೆ ಪಿ.ಯು.ಸಿ. ಓದಿರೊಕು. ಕೊಡಗ್ ಸಂಗಾತಿ ಪತ್ರಿಕೋದ್ಯಮಿಲಿ ಮುತ್‌ವರ್ಜಿ ಇರಕು. ತಿಂಗಳಿಗೆ ಕಮ್ಮಿತ್ತೇಳಿರೆ ಐದು ಸಾವಿರ ಆರಾಮಾಗಿ ಸಂಪಾದನೆ ಮಾಡಕ್. ಇಸ್ಟ ಇರ್ರು ಹೈದಂಗ ಸಂಗಾತಿಗೆ ಬರ್ಕಣಕ್.

**ವಿಳಾಸ : ಸಂಪಾದಕಿ, ಕೊಡಗ್ ಸಂಗಾತಿ, ಮೈಸೂರು - 12, ✆ : 0821/516771**

## ಜೀವಾವಧಿ ಸದಸ್ಯತನ ಕೊಟ್ಟಳೊ



ಶ್ರೀ ನಿಡ್ಯಮಲೆ ಎ. ಮಾಧವ ಇವು ಪತ್ರಿಕೆಯ ಅಭಿವೃದ್ಧಿ ಬಯ್ಸಿ ಜೀವಾವಧಿ ಸದಸ್ಯತನ ಕೊಟ್ಟೊಳೊ. ಇವು ಡೆಲ್ಲಿಲಿ ಸಾಗರ ವಿಜ್ಞಾನಿಯಾಗಿ ಕೆಲಸ ನಿರ್ವಹಿಸಿತ್ತೊಳೊ. ಇವುಕೆ ಕುಲದೇವ್ರು ವೆಂಕಟರಮಣನ ಕೃಪಾಕಟಾಕ್ಷ ಸದಾ ಇರಲಿತ್ತೇಳಿ ಸಂಗಾತಿ ಶುಭ ಹಾರೈಸಿದೆ. ಇವರ ಲೇಖನದ ಸಂಪುಟ 3, ಸಂಚಿಕೆ 11 ರಲ್ಲಿ ಪ್ರಕಟಿಸೊಳೊ.

- ಸಂಪಾದಕಿ

## ಶುಭ ವಿವಾಹ

ಕುಂಬಳದಾಳು ಗ್ರಾಮದ ಕುಂಜಿಲನ ರಾಮಯ್ಯನವರ ಪುತ್ರಿ ಭುವನೇಶ್ವರಿ (ಸ್ವಾತಿ) ಸುಳ್ಯ ತಾಲ್ಲೋಕು ಅಮರ ಮುದುನೂರು ಗ್ರಾಮದ ಅಲ್ಪಡ್ಕ ಶೇಷಪ್ಪನವರ ಪುತ್ರ ಸುಧಾಕರ (ಸುಧ) ನೆಂಬ ವರನಿಗೂ ದಿನಾಂಕ 24-4-2000 ದಂದು ಸೋಮವಾರ ವಿವಾಹವು ವಧುವಿನ ಸ್ವಗೃಹದಲ್ಲಿ ನೆರವೇರಿತು.

- ಕುಂಜಿಲನ ರಾಜ

 ಒಳನೋಟ

2000, ಏಪ್ರಿಲ್ 1-15 ರ ತನಕ





| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
| ಸಂಗಾತಿ ಚಿಹ್ನೆ ಮತ್ತು ಅರೆಭಾಷೆ ಕ್ಯಾಸೆಟ್ ಲಭ್ಯ | **ಪಾಂಡ್ಯನ್ ಕ್ಯಾಸೆಟ್ ಅಂಗಡಿ,** ಖಾಸಗಿ ಬಸ್ ನಿಲ್ದಾಣ, ಮಡಿಕೇರಿ ಫೋನ್ : 08272/29620 |
| ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
| ಬೆಂಗಳೂರು ಮಹಾನಗರ | **ಅಮ್ಮಾಜೀರ ಪೊನ್ನಪ್ಪ,** 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
| ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಮಾಯವಾಗುತ್ತಿರುವ ಸುವ್ವಿ ಪದಗಳು

ಕರ್ನಾಟಕ ಜಾನಪದ ಜಗತ್ತಿನಲ್ಲಿ ಜಾನಪದ ಹಾಡುಗಳಲ್ಲಿ ಹಲವಾರು ವಿಧಗಳಿವೆ. ಅಂತಹವುಗಳಲ್ಲಿ "ಸುವ್ವಿ" ಹಾಡು ಒಂದು ವಿಧದ ಜಾನಪದ ಹಾಡು.

ಸುವ್ವಿ ಹಾಡುಗಳು ನಮ್ಮ ಹೆಂಗಳೆಯರು ಕೃಷಿ ವ್ಯವಸಾಯ ಮಾಡುವ ಸಂದರ್ಭದಲ್ಲಿ ಭತ್ತ ಕುಟ್ಟುವಾಗ, ರಾಗಿ ಕಲ್ಲನ್ನು ತಿರುಗಿಸುವಾಗ ಜೊತೆ ಸೇರಿ ಹಾಡುತ್ತಿದ್ದ ಹಾಡುಗಳನ್ನು ಈಗ ಯಾರೂ ಹಾಡುವ ಪರಿಸ್ಥಿತಿಯಲ್ಲಿಯೇ ಇಲ್ಲ. ಇದರ ವಿಷಯದಲ್ಲಿ ಜನಪದ ಸಾಹಿತ್ಯದ ಇಲಾಖೆಯವರೂ ಹೆಚ್ಚಿನ ನಿಗ ವಹಿಸಿದಂತೆ ಕಾಣುವುದಿಲ್ಲ. ಗೌಡರಲ್ಲಿ ಯಾವ ರೀತಿ ಸೋಬಾನೆ ಹಾಡುಗಳು, ಮದುವೆ ಕಾರ್ಯಗಳಲ್ಲಿ ಹೇಳುತ್ತಿದ್ದರೋ ಅದೇ ರೀತಿ ಗೌಡರಲ್ಲಿ ಕೆಲಸ ಬೇಸಗೆಯಲ್ಲಿ ಸುವ್ವಿ ಹಾಡುಗಳನ್ನು ಹಾಡುತ್ತಿದ್ದರು.

ಸಾಧಾರಣ 1970ನೇ ಇಸವಿಯಲ್ಲಿ ದಕ್ಷಿಣ ಜಿಲ್ಲೆಯ ತಮ್ಮಣ ಗೌಡ ಮುಡೂರುರವರು ಈ ಬಗ್ಗೆ ಹೆಚ್ಚಿನ ಶ್ರಮ ವಹಿಸಿ ಕೆಲವು ಸುವ್ವಿ ಪದಗಳನ್ನು ಬರೆದು ಪ್ರಕಟಿಸಿದ್ದಾರೆ. ಇವರು ಹೊನ್ನಮ್ಮನ ಕೆರೆ ಎಂಬ ಸುವ್ವಿ ಕವನಕ್ಕೆ ಅಖಿಲ ಕರ್ನಾಟಕ ಮಲೆನಾಡು ಸಾಹಿತ್ಯ ಸ್ಪರ್ಧೆಯಲ್ಲಿ ಬಹುಮಾನವನ್ನು ಗಳಿಸಿದೆ. ಇದಲ್ಲದೆ ಅನೇಕ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಜನರ ಹಾಗೂ ಸರ್ಕಾರದ ಪ್ರೋತ್ಸಾಹ ಹೆಚ್ಚಿಗೆ ದೊರೆತ್ತದ್ದು ಕಂಡು ಬರಲಿಲ್ಲ. ಆದುದರಿಂದ ಕೊಡಗು ಗೌಡ ಸಾಂಸ್ಕೃತಿಕ ಅಕಾಡಮಿಯವರು ಹಾಗೂ ಕೊಡಗು ಗೌಡ ಮಹಿಳಾ ಒಕ್ಕೂಟದವರು ಜೊತೆ ಸೇರಿ ಶ್ರೀ ಟಿ. ಜಿ. ಮುಡೂರು ಇವರನ್ನು ಸಂಪರ್ಕಿಸಿ ಮಹಿಳಾ ಒಕ್ಕೂಟ ಮತ್ತು ಸಾಂಸ್ಕೃತಿಕ ಅಕಾಡಮಿಯವರು ಏರ್ಪಡಿಸುವ ಯಾವುದಾದರೂ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅವರನ್ನು ಬರಮಾಡಿಸಿ, ಅವರಿಂದ ಸುವ್ವಿ ಹಾಡುಗಳ ಮಾಹಿತಿಯನ್ನು ತಿಳಿದುಕೊಂಡರೆ ಸುವ್ವಿ ಹಾಡುಗಳ ಜೀರ್ಣೋದ್ಧಾರ ಮಾಡುವಂತಾಗುವುದೆಂದು ಸಂಗಾತಿಯ ಹಾರೈಕೆ. ಇಲ್ಲದೆ ಹೋದರೆ ಎತ್ತಲೊ ಕತ್ತಲಿಗೆ ನಮ್ಮ ಸಂಪ್ರದಾಯ ಸೇರಿ ಹೋಗುವ ದಿನಗಳು ಬಹು ದೂರ ಉಳಿದಿಲ್ಲವೆಂದು ಸಂಗಾತಿಯ ಅನಿಸಿಕೆ.

---

## ಕಾನೂನು ವಿಚಾರ ಸಂಕಿರಣ

ಕಾನೂನಿನ ಜ್ಞಾನವು ಪ್ರತಿಯೊಬ್ಬ ಪ್ರಜೆಗಳಿಗೂ ಅತಿ ಮುಖ್ಯ. ಜನಸಾಮಾನ್ಯರಲ್ಲಿ ಕಾನೂನಿನ ಜ್ಞಾನವನನು ಮೂಡಿಸಬೇಕು. ಪ್ರತಿಯೊಬ್ಬ ವ್ಯಕ್ತಿಗೂ ಕಾನೂನಿನ ಜ್ಞಾನವಿರಬೇಕು. ಜನ ಸಾಮಾನ್ಯರಲ್ಲಿ ಕಾನೂನಿನ ಜ್ಞಾನವಿದ್ದಲ್ಲಿ ಸಮಾಜದಲ್ಲಿ ಉತ್ತಮ ರೀತಿಯಲ್ಲಿ ಬದುಕ ಬಹುದು ಮತ್ತು ಕಾನೂನಿನ ಜ್ಞಾನದಿಂದ ದೇಶದ ಪ್ರಗತಿ ಸಾಧ್ಯ.

**ನ್ಯಾಯವಾದಿಗಳು ಮತ್ತು ವೃತ್ತಿ ಪಾವಿತ್ರ್ಯತೆ.**

ಪ್ರತಿಯೊಬ್ಬರಲ್ಲಿಯೂ ತಮ್ಮ ತಮ್ಮ ವೃತ್ತಿಯ ಬಗ್ಗೆ ಉತ್ತಮ ಅಭಿಪ್ರಾಯವಿರಬೇಕು ಮತ್ತು ಅವರು ಮಾಡುವ ಕರ್ತವ್ಯದಲ್ಲಿಯೂ ಉತ್ತಮ ಉದ್ದೇಶವಿರಬೇಕು. ಕಾನೂನು ಒಂದು ಪವಿತ್ರವಾದ ಕಾರ್ಯ. ನಾಯವಾದಿಗಳು ಕಾನೂನಿನ ಪರಿಪಾಲಕರು. ಕಾನೂನಿನ ವೃತ್ತಿ ಧರ್ಮ ಅಥವಾ ಪಾವಿತ್ರ್ಯತೆ ವಕೀಲರುಗಳ ಕೈಯಲಿದೆ. ಅದನ್ನು ಪಾಲಿಸಿದಾಗ ಮಾತ್ರ ಕಾನೂನಿನ ಬಗ್ಗೆ ನ್ಯಾಯವಾದಿಗಳ ಬಗ್ಗೆ ಗೌರವ ಮೂಡಲು ಸಾಧ್ಯ. ಕಾನೂನು ಕುರುಡಾಗಿರಬಹುದು. ನ್ಯಾಯ ಕುರುಡಲ್ಲ. ನ್ಯಾಯಕ್ಕೆ ಯಾವುದೇ ರೀತಿಯ ಭೇದ ಭಾವವಿಲ್ಲ. ಕಾನೂನಿನ ವೃತ್ತಿ ಪಾವಿತ್ರ್ಯತೆ ಪಾಲಿಸಿಕೊಂಡು ಬರುವುದು ಮತ್ತು ಕಾಪಾಡುವುದು ನ್ಯಾಯವಾದಿಗಳ ಕರ್ತವ್ಯ ಹಾಗೂ ಧರ್ಮ.

ನ್ಯಾಯವಾದಿಗಳು ಕೀಳೂ ಪ್ರವೃತ್ತಿಯಿಂದ ಹಣದ ಆಸೆಯಿಂದ ಮತ್ತು ಕೆಲಸ ಆಮಿಷಗಳಿಂದ ಕಕ್ಷಿದಾರರಿಗೆ ಅಥವಾ ಅಮಾಯಕರಿಗೆ ಅನ್ಯಾಯ ಮಾಡಬಾರದು. ಕಕ್ಷಿದಾರನಿಗೆ ಉತ್ತಮ ಸಲಹೆ ನೀಡಬೇಕು. ನ್ಯಾಯವಾದಿಗಳು ಉತ್ತಮ ಉದ್ದೇಶದಿಂದ ಕಾನೂನಿನ ನಿಯಮಗಳನ್ನು ಪಾಲಿಸಿ ತನ್ನ ವೃತ್ತಿ ಪಾವಿತ್ರ್ಯವನ್ನು ಉಳಿಸಿಕೊಂಡರೆ ಅವನು ಮಾಡುವ ಕಾರ್ಯದಲ್ಲಿ ಖಂಡಿತ ಯಶಸ್ಸು ಸಿಗುತ್ತದೆ.

**ನ್ಯಾಯವಾದಿಗಳ ಸಾಮಾಜಿಕ ಜವಾಬ್ದಾರಿ**

ಕಾನೂನಿನ ಆಧಾರದ ಮೇಲೆ ನ್ಯಾಯವು ನಿರ್ಧಾರವಾಗುತ್ತದೆ ಎಂಬುದು ಪ್ರತಿಯೊಬ್ಬ ನ್ಯಾಯವಾದಿಯಲ್ಲಿ ಇರಬೇಕು. ಕಾನೂನಿನ ಬಗ್ಗೆ ಗೌರವ ಇರಬೇಕು. ವೃತ್ತಿಯ ಬಗ್ಗೆ ಕೀಳರಿಮೆ ಇರಬಾರದು. ತನ್ನ ವೃತ್ತಿ ಪಾಲನೆಯಿಂದ ಸಾಧ್ಯವಾದಷ್ಟು ಮಟ್ಟಿಗೆ ಉತ್ತಮ ಸ್ಥಿತಿಗೆ ಸಮಾಜವನ್ನು ತರಬಹುದು ಎಂಬ ಉದ್ದೇಶ ಹಾಗೂ ಕರ್ತವ್ಯ ಇರಬೇಕು. ಒಬ್ಬ ನ್ಯಾಯವಾದಿಯ ಪ್ರಾಮಾಣಿಕ ಸೇವೆಯು ಅವನು ಮಾಡುವ ನ್ಯಾಯವಾದದ ಮೇಲೆ ನಿಂತಿದೆ. ಹಣ ಅಂತಸ್ತಿನಿಂದ ವ್ಯಕ್ತಿಯನ್ನು ಅಳೆಯಬಾರದು. ನ್ಯಾಯದ ಬಗ್ಗೆ ಕಳಕಳಿ ಇರಬೇಕು. ಒಬ್ಬ ಕೆಟ್ಟ ನ್ಯಾಯವಾದಿಯು ಒಂದು ಒಳ್ಳೆಯ ನ್ಯಾಯಧೀಶನಾಗಬಲ್ಲ. ನಮ್ಮಿಂಡ ಸಾಧ್ಯವಿದ್ದಷ್ಟು ಕಾನೂನಿನ ನೆರವನ್ನು ನೀಡಬೇಕು. ಮತ್ತು ಸಮಾಜದಲ್ಲಿ ಒಂದು ಒಳ್ಳೆಯ ವ್ಯಕ್ತಿತ್ವನ್ನು ರೂಢಿಸಿಕೊಳ್ಳಬೇಕು. ಕೆಟ್ಟ ಅಥವಾ ಸಮಾಜ ಘಾತಕ ವ್ಯಕ್ತಿಗಳನ್ನು ಆದರ್ಶವಾಗಿಟ್ಟುಕೊಳ್ಳುವ ಬದಲು ಮಹಾತ್ಮರನ್ನು ಉತ್ತಮರನ್ನು, ಮಹಾಪುರುಷರುಗಳನ್ನು ಆದರ್ಶವಾಗಿಟ್ಟು ಕೊಂಡು ನಮ್ಮ ವೃತ್ತಿಯನ್ನು ನಿರ್ವಹಿಸಬೇಕು. ಮತ್ತು ನಮಗೆ ಸಾಮಾಜಿಕ ಸಮಸ್ಯೆಗಳ ಬಗ್ಗೆ ಜವಾಬ್ದಾರಿ ಇರಬೇಕು. ಹಾಗೂ ಕರ್ತವ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸಬೇಕು. ಉತ್ತಮ ವ್ಯಕ್ತಿತ್ವ ರೂಢಿಸಿಕೊಂಡು ಕರ್ತವ್ಯ ಪಾಲಿಸಬೇಕು. ಗೌರವ ಮತ್ತು ಸಾಮಾಜಿಕ ಜವಾಬ್ದಾರಿಯು ನ್ಯಾಯವಾದಿಗಳ ವೃತ್ತಿಯ ಅವಿಭಾಜ್ಯ ಅಂಗವಾಗಿರಬೇಕು.

**ಕಾನೆಹಿತ್ಲು ನಳಿನಿ ನಂಜಪ್ಪ, ಕುಶಾಲನಗರ**

---

ಅರೆಭಾಷಿಕರು ಉದಾರಿಗಳು, ದಾನಿಗಳು, ತ್ಯಾಗಿಗಳು ಆಗಬೇಕು

## ಸ್ವಾರ್ಥ :

ಸ್ವಾರ್ಥ ಎಂದರೇನು? ಸ್ವ + ಅರ್ಥ = ಸ್ವಾರ್ಥ.

ಸ್ವ = ಸ್ವಂತ, ತನಗೆ, ಅರ್ಥ = ಹಣ, ಆಸ್ತಿ. ಮನುಷ್ಯನು ತನ್ನ ಸ್ವಂತಕ್ಕೆ ಗಳಿಸುವುದನ್ನು ಒಂದು ಅರ್ಥದಲ್ಲಿ ಸ್ವಾರ್ಥ ಎಂದು ಹೇಳಬಹುದು. ಇನ್ನೊಂದು ಅರ್ಥದಲ್ಲಿ ಸ್ವಾರ್ಥ ಎಂದರೆ ಬೇರೆಯವರಿಗೆ ಒಳ್ಳೆಯದಾಗಲಿ ಬಿಡಲಿ ತಾವು ಮಾತ್ರ ಒಳ್ಳೆಯದಾದರೆ ಸಾಕು ಎಂದು. ಮತ್ತೊಂದು ಅರ್ಥದಲ್ಲಿ ಸ್ವಾರ್ಥ ಎಂದರೆ ಬೇರೆಯವರನ್ನು ತುಳಿದು ತಾನು ಗಳಿಸುವುದು.

ಒಬ್ಬ ಕನಿಷ್ಠ ಭಿಕ್ಷುಕನಿಂದ ಹಿಡಿದು ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಯೂ ಇಂದು ಸ್ವಾರ್ಥದಿಂದ ಕೂಡಿದವರಾಗಿದ್ದಾರೆ. ತನಗೆ, ತನ್ನ ಸಂಘಕ್ಕೆ, ತನ್ನ ಸಂಸ್ಥೆಗೆ, ತನ್ನ ಆಶ್ರಮಕ್ಕೆ ಹೀಗೆ "ತನ್ನ" ಎಂಬ ಹಿನ್ನೆಲೆಯಲ್ಲಿ ಸ್ವಾರ್ಥವಿಲ್ಲದೆ ಇಂದು ನಡೆಯುವುದಿಲ್ಲ. ಆದರೆ ಸ್ವಾರ್ಥದ ಜೊತೆಗೆ ಬೇರೆಯವರಿಗೂ ಸಹಕಾರಿಯಾಗುವಂತೆ ಕೆಲವು ಸಂಘ, ಸಂಸ್ಥೆಗಳು ಶ್ರಮಿಸುತ್ತಿವೆ. ಇದರಲ್ಲಿ ಮುಖ್ಯವಾಗಿ ನಾನು ಹೇಳಬೇಕೆಂದಿರುವ ವಿಚಾರ ನಮ್ಮ "ಸಂಗಾತಿ ಪತ್ರಿಕೆ" ಮತ್ತು "ಕಾವೇರಿನಾಡು ವಿದ್ಯಾಸಂಸ್ಥೆ" "ಕಾವೇರಿನಾಡು ಜನಪದ ಸಾಂಸ್ಕೃತಿಕ ಒಕ್ಕೂಟ".

ಉದಾ : ಪಟ್ಟಡ ಪ್ರಭಾಕರ ದಂಪತಿಗಳು. ಇವರಿಗೆ ಸ್ವಂತ ಉದ್ಯೋಗವಿದೆ. ಆಸ್ತಿ ಪಾಸ್ತಿ ಇದೆ. ಅವರ ಸಂಸಾರಕ್ಕೆ ಬೇಕಾದಷ್ಟು ದುಡಿಯುತ್ತಿದ್ದಾರೆ. ಅವರಿಗೆ ಹಣ ಮಾಡುವ ದುರಾಶೆ ಇದ್ದಿದ್ದರೆ, ಇಂದಿನ ಸಮಾಜದಲ್ಲಿ ದಿಢೀರ್ ಶ್ರೀಮಂತರಾಗಲು ಬೇಕಾದಷ್ಟು ಅವಕಾಶಗಳಿವೆ. ಹೀಗಿರಲು ಅವರು ಪತ್ರಿಕೋದ್ಯಮಕ್ಕೆ ಕೈ ಹಾಕಿ ಹಣ ಗಳಿಸಬೇಕೆ? ಈ ಉದ್ಯಮದಲ್ಲಿ ಉದ್ಧಾರ ಆಗಿರುವುದಕ್ಕಿಂತ ಕೈ ಸುಟ್ಟುಕೊಂಡಿರುವದೇ ಹೆಚ್ಚು ಜನ. ಹೀಗಿರುವಾಗ ನಮ್ಮ ಜನಾಂಗದವರೇ ಆಗಿ ಅವರಿಗೆ ಸಹಾಯ ಮಾಡುವ ಬದಲು ಅವರನ್ನು ಸ್ವಾರ್ಥಿಗಳು ಎಂದು ಟೀಕಿಸುವುದು ಸರಿಯೇ?

ಇಂದು ಪತ್ರಿಕೆ ಜನ್ಮ ತಾಳಿ ಮೂರನೇ ವರುಷ ದಾಟಿ, ನಾಲ್ಕನೇ ವರುಷದ ಕಡೆ ದಾಪುಗಾಲು ಹಾಕುತ್ತಿದೆ. ಸಂಗಾತಿ ಬಡತನದ ಕತೆಯನ್ನು ಸಂಪಾದಕಿಯವರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ತಿಳಿಸುತ್ತಿದ್ದಾರೆ. ಹಾಗಿದ್ದರೂ ನಾವು ಜಡ ಬೊಂಬೆಗಳಂತಿರುವುದು ಸರಿಯೇ? ನಮ್ಮ ಜನರಲ್ಲಿ ಇಂದು ಹಳ್ಳಿಯಿಂದ ಡಿಲ್ಲಿಯವರೆಗೆ ದುಂದು ವೆಚ್ಚ ಬಹಳಷ್ಟು ನಡೆಯುತ್ತಿದೆ. ಪಾರ್ಟಿ ಅದು ಇದು ಅಂತ ಬಾಟಲಿಗಟ್ಟಲೆ ಕುಡಿಯಲು ತರುತ್ತಾರೆ. ಸಾವಿರಾರು ರೂ. ಖರ್ಚು ಮಾಡಿ ತಮ್ಮ ಪ್ರತಿಷ್ಠೆಯನ್ನು ತೋರಿಸಿಕೊಳ್ಳುತ್ತಾರೆ. ಹಾಗೆಯೇ ಇದು ಕೂಡ ಒಂದು ಸಣ್ಣ ಪಾರ್ಟಿಯಲ್ಲಿ ಖರ್ಚು ಮಾಡಿದ್ದು ಎಂದು ಕೊಂಡು ನಮ್ಮ ಸಂಗಾತಿಯ ಉಳಿವಿಗೆ, ಅವಳ ಹುಟ್ಟು ಹಬ್ಬದ ಪ್ರಯುಕ್ತ ಉಡುಗೊರೆಯಾಗಿ ನೀಡಬಹುದಲ್ಲವೆ?

ಸಂಗಾತಿ ಯಾವುದೇ ಕಾರಣದಿಂದ ನಿಂತುಹೋದರು ಅದರ ಅವಮಾನ ಪಟ್ಟಡ ಪ್ರಭಾಕರ ದಂಪತಿಗಳಿಗಲ್ಲ ಇಡೀ ಅರೆ ಭಾಷಿಕ ಗೌಡ ಜನಾಂಗಕ್ಕೆ. ಆದ್ದರಿಂದ ನಾವೆಲ್ಲರೂ ಇಂದೇ ಕಂಕಣ ಬದ್ಧರಾಗೋಣ. ಸಂಗಾತಿಯ ಉಳಿವಿಗಾಗಿ ನಾವೆಲ್ಲರೂ ಅಳಿಲು ಸೇವೆ ಮಾಡೋಣ. ನಮ್ಮ ಜನಾಂಗದ ಮಗುವಿಗೆ ಮೂರುಹೊತ್ತು ಮೃಷ್ಟಾನ್ನ ಭೋಜನ ಮಾಡಿಸೋಣ. ಇದು ನಮ್ಮ ಜನಾಂಗಕ್ಕೊಂದು ಸವಾಲಾಗಲಿ.

ಇದೇ ರೀತಿಯಲ್ಲಿ ಕಾವೇರಿ ನಾಡಿನ ವಿದ್ಯಾಸಂಸ್ಥೆಗೂ ಕೊನೆ ಪಕ್ಷ ಎರಡು ಸಾವಿರವಾದರೂ ನೀಡಿ ಜನಾಂಗದ ಪ್ರತಿಯೊಂದು ಕುಟುಂಬದವರೂ ಮೆಂಬರಾದರೆ ಮುಂದೆ ಅನುಕೂಲವಾದಾಗ ಸೈಟು ಕೊಂಡುಕೊಳ್ಳಬಹುದು. ಇಲ್ಲವೆ ವಿದ್ಯಾಸಂಸ್ಥೆಗೆ "ಸಹಾಯ ಧನ" ಎಂದಾದರೂ ನೀಡಬಹುದಲ್ಲವೆ? ಈ ಸಂಸ್ಥೆ ಮುಂದೆ ಹಿರಿದಾಗಿ ಬೆಳೆದಾಗ ನಮ್ಮ ಜನಾಂಗದವರಿಗೆ ಉದ್ಯೋಗ, ನಮ್ಮ ಮಕ್ಕಳಿಗೆ ಕಡಿಮೆ ದರದಲ್ಲಿ ವಿದ್ಯಾಭ್ಯಾಸ ಎಲ್ಲವೂ ಲಭ್ಯವಾಗುವುದು. ಒಂದು ಒಳ್ಳೆಯ ವಿದ್ಯಾಸಂಸ್ಥೆಯಲ್ಲಿ ಇಂದು ಸ್ಥಳ ದೊರೆಯಬೇಕಾದರೆ ಸಾವಿರಾರು ರೂ. ಡೊನೇಷನ್ ಕೊಡಬೇಕು. ಹೀಗಿರುವಾಗ ನಮ್ಮ ಜನಾಂಗದ್ದೇ ಆದ ವಿದ್ಯಾ ಸಂಸ್ಥೆ ಮುಂದೆ ಬಂದಾಗ ಆರ್ಥಿಕವಾಗಿ ಸಹಾಯ ಮಾಡುವುದು ಪ್ರತಿಯೊಬ್ಬ ಅರೆಭಾಷಿಕನ ಆದ್ಯ ಕರ್ತವ್ಯವೂ ಹೌದು. ನೀವು ಖಂಡಿತವಾಗಿ ಈ ಲೇಖನವನ್ನು ನೋಡಿ ನಮ್ಮ ಸಮಾಜವನ್ನು ಉದ್ಧರಿಸುವತ್ತ ಗಮನ ಹರಿಸಿ, ಎಂಬುದು ನನ್ನ ಪ್ರಾರ್ಥನೆ.

ಅರೆಭಾಷಿಕರ ಎಲ್ಲಾ ಹಿರಿಯ ಹಾಗೂ ಕಿರಿಯ ವನಿತೆಯರಲ್ಲಿ ನನ್ನದೊಂದು ಹೃದಯಂಗಮ ವಿನಂತಿ. ನಿಮ್ಮ ತಾಯಿತನವನ್ನು ಜಾಗೃತಗೊಳಿಸುವ ಕಾಲ ಈಗ ಬಂದಿದೆ. ನಿಮ್ಮ ಸಾಸಿವೆ ಡಬ್ಬಿ, ಜೀರಿಗೆ ಡಬ್ಬಿಯಲ್ಲಿರುವ ಪುಡಿಕಾಸನ್ನಾದರೂ ನಿಮ್ಮ ಅರೆ ಭಾಷಿಕ ಮಗುವಿಗೆ ನೀಡಿ. ಈ ಮಗು (ಸಂಗಾತಿ) ವನ್ನು ಕಾಪಾಡಿ. ಹನಿ ಹನಿ ಸೇರಿದರೆ ಹಳ್ಳವಾಗುವುದು ಎಂಬುದನ್ನು ಜಗತ್ತಿಗೆ ತೋರಿಸಿ ಕೊಡಿ.

**ಬಿಟ್ಟೀರ ಚೋಂದಮ್ಮ ಶಂಭು, ಬೆಂಗಳೂರು**

---

### ಇವುಗಳನ್ನೆಂದೂ ಮರೆಯದಿರಿ

1. ನಿಯಮದಿಂದ ಮಾಡು - ಭಜನೆ, ಭೋಜನ, ವ್ಯಾಯಾಮ
2. ಆದರದಿಂದ ಕಾಣು - ತಂದೆ, ತಾಯಿ, ಗುರು
3. ಚೇಷ್ಟೆ ಮಾಡದಿರು - ಹುಚ್ಚ, ಮುದುಕ, ಮೂರ್ಖ
4. ನೆನಪಿನಲ್ಲಿಡು - ಬ್ರಹ್ಮ, ವಿಷ್ಣು, ಮಹೇಶ್ವರ
5. ಅಂಜುತ್ತಿರು - ಸುಳ್ಳು, ನಿಂದೆ, ಕಳ್ಳತನ
6. ನಿನ್ನ ವಶದಲ್ಲಿರಲಿ - ಇಂದ್ರಿಯ, ಮನಸ್ಸು, ಕ್ರೋಧ
7. ಕೈ ಬಿಡಬೇಡ - ವಚನ, ಗೆಳೆತನ, ಪ್ರೀತಿ,
8. ದಕ್ಷತೆ ವಹಿಸು - ಶ್ರದ್ಧೆ, ನೀತಿ, ನಡುವಳಿಕೆ
9. ಪ್ರೀತಿಸು - ಪ್ರಾಮಾಣಿಕತೆ, ಸತ್ಯ, ಪಾವಿತ್ರ್ಯತೆ
10. ತಪ್ಪಿಸು - ಕುಡಿತ, ಧೂಮಪಾನ, ಜೂಜಾಟ
11. ಮನ್ನಣೆ ನೀಡು- ವೃದ್ಧಾಪ್ಯ, ಕರ್ಮ, ಕಾಯಿದೆ
12. ಇವು ಮೂರನ್ನು ಅವಶ್ಯವಾಗಿ ಪಡೆ - ಶಿಕ್ಷಣ, ಅನುಭವ, ಜ್ಞಾನ

**ಸಂಗ್ರಹ : ಕೆದಂಬಾಡಿ ಪುಷ್ಪಾ ತಿಮ್ಮಯ್ಯ, ಕುಂದಚೇರಿ**

---

ಕಲಿಕಾಲದಲ್ಲಿ ಸತ್ಯಕ್ಕೆ ಬೆಲೆ ಇಲ್ಲ - ಎಂದಾದರು ಬೆಲೆ ಬರುತ್ತೆ

# ರಾಷ್ಟ್ರಮಟ್ಟದಲ್ಲಿ ಮಿನುಗಿದ ನಮ್ಮ ಹೈದ



ಒಡಿಯಂಡ ಮಹೇಶ್‌ರಾಜ್

ಮಡಿಕೇರಿ ಸಮೀಪ ಮೇಕೇರಿ ಗ್ರಾಮದ ಒಡಿಯನ ಪುಟ್ಟಯ್ಯ ಮತ್ತು ದೇವಕ್ಕಿ ದಂಪತಿಗಳ ಪುತ್ರನಾಗಿ 11-3-80ರಲ್ಲಿ ಮೇಕೇರಿಯಲ್ಲಿ ಜನಿಸಿದರು. ಇವರು ಮಡಿಕೇರಿಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿನ ದ್ವಿತೀಯ ಬಿ.ಎ. ವಿದ್ಯಾರ್ಥಿಯಾಗಿದ್ದಾರೆ. ಮತ್ತು ಕಾಲೇಜನ ಎನ್.ಸಿ.ಸಿ. ದಳದಲ್ಲಿ ಸಾರ್ಜೆಂಟ್ ಸಹ ಆಗಿರುವರು.

ಈ ವರ್ಷ ದೆಹಲಿಯಲ್ಲಿ ನಡೆದ ರಾಷ್ಟ್ರಮಟ್ಟದ ತಲ್‌ಸೇನ್ ಕ್ಯಾಂಪ್‌ನಲ್ಲಿ ಭಾಗವಹಿಸಿದ್ದ ಇವರು ಈ ಕ್ಯಾಂಪ್‌ನಲ್ಲಿ ಗೋವಾ ಮತ್ತು ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿರುತ್ತಾರೆ. ಆಯ್ಕೆಯು ಮಂಗಳೂರು ವಿಭಾಗ ಮಟ್ಟದ ಘಟಕಕ್ಕೆ ನಾಲ್ಕು ಜಿಲ್ಲೆಗಳಾದ ಕೊಡಗು, ಮಂಗಳೂರು, ಶಿವಮೊಗ್ಗ, ಉಡುಪಿ ಜಿಲ್ಲೆಗಳಾಗಿರುತ್ತವೆ. ಹೀಗೆ ನಾಲ್ಕು ಜಿಲ್ಲೆಗಳಿಂದ ಆಗಮಿಸಿದ 430 ಎನ್.ಸಿ.ಸಿ. ಕೆಡೆಟ್‌ಗಳಿಗೆ 45 ದಿನಗಳ ರೈಫಲ್ ಶೂಟಿಂಗ್, ನೈಟ್ ನೆವಿಗೇಷನ್ ಮತ್ತು ಅಪ್‌ಸ್ಟೆಕಲ್ ಕೋರ್ಸ್ ವಿಷಯದಲ್ಲಿ ಉಜಿರೆ, ಮಡಿಕೇರಿ, ಸೂರತ್‌ಕಲ್‌ಗಳಲ್ಲಿ ತರಬೇತಿ ನೀಡಲಾಯಿತು. ನಂತರ 430ಕ್ಯಾಡೇಟ್‌ಗಳ ಪೈಕಿ 50 ಮಂದಿಯನ್ನು ಆರಿಸಿ ರಾಜ್ಯಮಟ್ಟಕ್ಕೆ ಕಳುಹಿಸುತ್ತಾರೆ.

ಹೀಗೆ ಆಯ್ಕೆಯಾದ 50ಮಂದಿ ಕ್ಯಾಡೆಟ್‌ಗಳಲ್ಲಿ ನಮ್ಮ ಈ ಮೇಲಿನ ಹೈದನೂ ಒಬ್ಬನಾಗಿದ್ದಾನೆ.

ಕರ್ನಾಟಕ ಮತ್ತು ಗೋವಾದಿಂದ ಬಂದ ಕ್ಯಾಡೆಟ್‌ಗಳಿಗೆ 30 ದಿನಗಳ ತರಬೇತಿ ನೀಡಲಾಗುವುದು. ಇವರಿಗೆ 10 ಬಾರಿ ಪ್ರ್ಯಾಕ್ಟಿಕಲ್ ಟೆಸ್ಟ್ ಕೊಡುತ್ತಾರೆ. 10 ಬಾರಿಯು ಉತ್ತಮ ಪ್ರದರ್ಶನ ನೀಡಿದ 13 ಕ್ಯಾಡೆಟ್‌ಗಳನ್ನು ಆರಿಸುತ್ತಾರೆ. ಹೀಗೆ ಆರಿಸಿದಲ್ಲಿ ಮಹೇಶ್ ರಾಜ್ ಸಹ ಒಬ್ಬ. ನಂತರ ಹೀಗೆ ಭಾರತದ ವಿವಿದ ಭಾಗಗಳಿಂದ ಸುಮಾರು 650 ಕ್ಯಾಡೆಟ್‌ಗಳು ಭಾಗವಹಿದರು. ಹೀಗೆ ನಡೆಸಿದ ಸೆಣಸಾಟದಲ್ಲಿ ಗೋವಾ ಮತ್ತು ಕರ್ನಾಟಕ ತಂಡಕ್ಕೆ ತೃತೀಯ ಸ್ಥಾನ ಸಿಕ್ಕಿದೆ.

ಮಂಗಳೂರು ವಿಭಾಗದಿಂದ ಆಯ್ಕೆಯಾದ ಏಕೈಕ ಕ್ಯಾಡೆಟ್ ಮಹೇಶರಾಜ್ ಆಗಿದ್ದಾರೆ. ಇವರು ಉತ್ತಮ ಶೂಟರ್ ಅಲ್ಲದೆ, ಒಳ್ಳೆಯ ಅಥ್ಲೆಟ್ ಮತ್ತು ಪುಟ್ಬಾಲ್ ಪಟು ಸಹ ಹೌದು. ಅಲ್ಲದೆ ಕಳೆದ ವರ್ಷ ಮರಗೋಡಿನಲ್ಲಿ ನಡೆದ ಸಂಗಂ ಪುಟ್ಬಾಲ್ ಟ್ರೋಫಿ ಪಂದ್ಯಾಟದಲ್ಲಿ ಉತ್ತಮ ಗೋಲ್ ಕೀಪ್ ಪ್ರಶಸ್ತಿಯ್ನು ಪಡೆದಿರುತ್ತಾರೆ. ಪುಟ್ಬಾಲ್‌ನಲ್ಲಿ ರಾಜ್ಯಮಟ್ಟದಲ್ಲಿ ಆಡಿರುತ್ತಾರೆ. ಹಾಗೂ ಅನೇಕ ಪದಕಗಳನ್ನು ತನ್ನದಾಗಿಸಿಕೊಂಡಿರುತ್ತಾರೆ. ಜಿಲ್ಲೆಗೆ ಮತ್ತು ಜನಾಂಗಕ್ಕೆ ಹೆಸರು ತಂದ ಇವರು ಇನ್ನೂ ಹೆಚ್ಚಿನ ಯಶಸ್ಸನ್ನು ಗಳಿಸಲಿ ಎಂದು ಶುಭ ಹಾರೈಸೋಣ

ಬರಹ : ಕಿರಣ್ ಕುಮಾರ್, ಮೇಕೇರಿ.

---

## ಪಂಚಶ್ರೇಷ್ಠಗಳು

| | | | |
|---|---|---|---|
| 1. | ಪಂಚಾಮೃತಗಳು | - | ಹಾಲು, ಮೊಸಲು, ತುಪ್ಪ. ಜೇನು, ಸಕ್ಕರೆ. |
| 2. | ಪಂಚಪತಿವ್ರತೆಯರು | - | ಅಹಲ್ಯೆ, ದ್ರೌಪದಿ, ಸೀತೆ, ತಾರೆ, ಮಂಡೋದರಿ. |
| 3. | ಪಂಚದ್ರಾವಿಡ ಭಾಷೆಗಳು | - | ಕನ್ನಡ, ತಮಿಳು, ತೆಲುಗು, ಮಲೆಯಾಳಂ, ತುಳು. |
| 4. | ಪಂಚ ಪಾಂಡವರು | - | ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ. |
| 5. | ಪಂಚ ಪ್ರಾಣಗಳು | - | ಪ್ರಾಣ, ಅಪಾನ, ದ್ಯಾನ, ಉದಾನ, ಸಮಾನ. |
| 6. | ಪಂಚ ಬಾಣಗಳು | - | ಅರವಿಂದ, ಅಶೋಕ, ಚೂತ, ಮಲ್ಲಿಕಾ, ನಿಲೋತ್ಪಲ. |
| 7. | ಪಂಚ ಆಹಾರಗಳು | - | ಭಕ್ಷ್ಯ, ಭೋಜ್ಯ, ಲೇಹ, ಚೋಪ್ಯ, ಪಾನೀಯ. |
| 8. | ಪಂಚ ಭೂತಗಳು | - | ಭೂಮಿ, ನೀರು, ಅಗ್ನಿ, ವಾಯು, ಆಕಾಶ. |
| 9. | ಪಂಚ ಲೋಹಗಳು | - | ತಾಮ್ರ, ಸೀಸ, ಹಿತ್ತಾಳೆ, ತವರ, ಕಬ್ಬಿಣ. |
| 10. | ಪಂಚ ವರ್ಣಿಗಳು | - | ಶ್ವೇತ, ಪೀತ, ರಕ್ತ, ಹರಿತ, ಕೃಷ್ಣ. |
| 11. | ಪಂಚಾಂಗಗಳು | - | ತಿಥಿ, ವಾರ, ನಕ್ಷತ್ರ ಯೋಗ, ಕರಣ. |
| 12. | ಪಂಚ ಕಜ್ಜಾಯಗಳು | - | ಬೆಲ್ಲ, ತೆಂಗಿನಕಾಯಿ, ಎಳ್ಳು, ಕಡಲೆ ಅವಲಕ್ಕಿ. |

ಬೆಳ್ಯನ ಪರಿ ಮಾಚಯ್ಯ
ಸಂಪಾಜೆ

---

**ಮರದ ಕೇಡು ಮರಕ್ಕೆ, ತನ್ನ ಕೇಡು ತನಗೇನೆ**

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

(ಹಿಂದಿನ ಸಂಚಿಕೆಂದ) ಧಾರಾವಾಹಿ - 9

ಸರಿಯಾದ ಗುರ್ತು, ಗೋತ್ರ ಇಲ್ಲದ ಮಿಸ್ಟರ್ ರಾಜುನ ಕೇಸ್ ಜಯಲಕ್ಷ್ಮಿಪುರಂ ಪೋಲಿಸ್ ಸ್ಟೇಷನ್‌ಲಿ, ಅವನ ಭಾವ ಚಿತ್ರದೊಟ್ಟಿಗೆ ಬುಕ್ ಆತ್. ಇದಾದ ಮೇಲೆ ಇವನ ಪೋಟೋನ ಬೇಕಾದಷ್ಟ್ ಪ್ರಿಂಟ್ ತೆಗ್ದ್ ಎಲ್ಲಾ ಸ್ಟೇಷನ್‌ಗಳಿಗೆ ಕಳುಹಿಸಿ ಕೊಟ್ಟು ಬುಟ್ರೊ. ಹಿಂಗಾಗಿ ಈಗ ಮಿ. ರಾಜುನ ಸುತ್ತ ಎಲ್ಲಾ ಕಡೆ ಪೋಲಿಸ್‌ನವುಕೆ ಹುಡುಕಾಡುವ ಕೆಲಸ ಶುರು ಆಗಿ ಹೋತ್.

ನಂಜನಗೂಡ್ ಕಡೆಗೆ ರಸ್ತೆಲಿ ಮಿ. ರಾಜು ನಡ್ದದ್ದೇ ನಡ್ದದ್. ಗ್ಯಾನ ಬಾಕಾಕನ ಒಂದೊಂದ್ ಸಿಗರೇಟ್‌ನ ಹಚ್ಚಿ ಬಿಟ್ಟ್‌ಕಂಡ್ ತಲೆಲಿ ಸಾವಿರ ಚಿಂತೆನ ಚಿಂತಿಸಿಕಂಡ್, ನನ್ನ ಗುರುನ ಪ್ರೇರಣೆ ಹೆಂಗಿದ್ದದ್ದೋ ಹಂಗೆ ಆಗಲಿ ತಾ ಆ ದೇವರ ಮೇಲೆ ಭಾರ ಹಾಕಂಡ್ ಕಲ್ಲಹಳ್ಳಿ ಕಬಿನಿ ಹೊಳೆಗೆ ಹಾಕಿದ ಭಾರೀ ಉದ್ದದ ಸೇತುವೆ ಮೇಲೆ ನಡ್ದ್ ಹೋತಿತ್.

ಅಷ್ಟೊತ್ತಿಗೆ ಕೆಳಗಡೆ ನೀರಿಗೆ ಭಾರಿ ದೊಡ್ಡ ಸೈಜ್‌ಕಲ್ಲ್ ಬಿದ್ದಂಗೆ ಸದ್ದ್ ಆಕೆಕಾನ ಕೂಡ್ಲೆ ಮಿಸ್ಟರ್ ರಾಜುಗೆ ಎಚ್ಚರ ಆತ್. ಓಡಿಹೋಗಿ ಸೇತುವೆಂದ ಕೆಳಗಡೆಗೆ ಬೊಗ್ಗಿ ನೋಡ್ರೆ ಒಂದ್ ಹೆಂಗ್ಸ್‌ನ ಜೀವ ಆ ಆಳದ ನೀರ್‌ಲಿ ಮುಳುಗಿ ಒದ್ದಾಡುತಿರುದರ ಕಂಡತ್. ಒಂದೇ ಕ್ಷಣಲಿ ಮೇಲೆಂದ ನೀರಿಗೆ ಹಾರ್ತ್. ಅಷ್ಟಕ್ಕೆ ಆ ಹೆಂಗ್ಸ್ ಎರಡ್ ಸರ್ತಿ ನೀರ್ ಕುಡ್ದ್ ಮುಳುಗಿ ಎದ್ದ್ ಆಯ ತಪ್ಪಿ ಒದ್ದಾಡ್‌ತಿತ್ತ್, ಹಾರ್ದ ರಭಸಕ್ಕೆ ನೀರ್‌ನ ಒಳಗೆ ಹೋದಂವ ಮೇಲೆ ಬಾಕಾಕನ ಈ ಮುಳುಗಿದ ಶರೀರನ ಒಂದ್ ಕೈಲಿ ಸೇರ್ಸಿ ಹಿಡ್‌ಕಂಡ್ ದಡದ ಕಡೆಗೆ ಈಜು ಹೊಡ್ತ್. ನೆಲ್ಲಮುಟ್ಟಿದಂಗೆ ಅವಳ್ನ ಎಳ್ದ್ ಹೊಳೆ ದಂಡೆ ಮೇಲಕ್ಕೆ ಎಳ್ಕಂಡ್ ಬಂದ್ ಕಂಪರ ಮಲುಗಿಸಿತ್. ಬೆನ್ ಹಿಂದೆಂದ ಅಂಗೈಲಿ ಜೋರ್ ಜೋರಾಗಿ ಒತ್ತಿತ್. ಆಗ ಅವಳ ಬಾಯಿಂದ ಸುಮಾರ್ ಸರ್ತಿ ನೀರು ಹೊರಗೆ ಚಿಮ್ಮಿ ಹಾರ್ತ್ ಆಗ ಅವಳಿಗೆ ನಿಧಾನ ಆಗಿ ಸೊಯ ಬಾತ್. ಮೆಲ್ಲಂಗೆ ಕಣ್ಣ್ ಬುಟ್ಟತ್. ಆಗ ಮಿ. ರಾಜು ಅವಳ್ನನ್ನ ಸರಿಯಾಗಿ ತನ್ನ ಮೈಗೆ ಒರಗಿಸಿ ಕೂರ್ಸಿಕಂಡತ್. ಅರ್ಧಮರ್ಧ ಕಣ್ಣಬುಟ್ಟ ಆ ಗೂಡೆ ರಾಜುನ ಮುಖ ನೋಡಿಕೆ ಪ್ರಯತ್ನ ಪಡ್‌ತಿತ್ತ್. ಕೂಡ್ಲೆ ರಾಜು ಅವಳ ತಲೆಸವರಿ ಅವಳ ಕೆನ್ನೆನ ತನ್ನ ಬೊಗಸೆ ಕೈಲಿ ಹಿಡ್ದ್, ಭಯಪಡಬೇಡಮ್ಮ ಗಾಬರಿ ಆಗಬೇಡ, ಮನ್ಸಿಗೆ ಧೈರ್ಯ ತಂದ್‌ಕತ್ತೇಳಿ ಅವಳಿಗೆ ಧೈರ್ಯ ಹೇಳ್ತ್. ಸದ್ಯ ನಿನ್ನ ಆಯಸ್ಸು ಗಟ್ಟಿಉಟ್ಟು. ನಿನ್ನ ಪ್ರಾಣನ ನಾನ್ ಉಳ್ಸಿದೆ. ನೀನು ಅದೃಷ್ಟವಂತೆ ತ್ತೇಳಿಕಂಡ್ ರಾಜು ಅವಳ ಮುಖ ನೋಡಿ ಹೇಳಿಕಂಡ್ ಖುಷಿಪಟ್ಟತ್ತ್.

ಈ ಮಾತ್‌ನ ಕೇಳಿದ ಗೂಡೆ ತಕ್ಷಣ ದುಃಖ ತಡಿಯಕೆ ಬೊತ್ತದೆ ಬಿಕ್ಕಳಿಸಿ ಕಂಡ್ ಅಳಿಕೆ ಶುರ್ ಮಾಡ್ತ್. ಅವಳ ಒಂದ್ ಸುಟ್ಟುಹೋಗಿ ಕುಂಟಾದ ಕಾಲ್‌ನ ಮುಂದೆ ಮಾಡಿ ತೋರ್ಸಿಕಂಡ್ ಏನೇನೋ ಹೇಳಿಕೆ ಕಷ್ಟ ಪಟ್ಟ್‌ಕಂಡ್ ಗಳಗಳನೆ ಅತ್ತ್‌ಬುಟ್ಟತ್. ಇಂವ ಎಷ್ಟು ಹೊತ್ತ್ ಅವಳ್ನ ಸಮಾಧಾನ ಮಾಡ್ರೂ ಅವ್ಳ ಅಳು ಕಂಟ್ರೋಲಿಗೆ ಬಾತ್ಲೆ. ಇವಳ ಕಣ್ಣೀರ್‌ಂದ ಪುನಃ ಇವನ ಮಡಿಲು ಪೂರ್ತ ಒದ್ದೆ ಆತ್. ಇವ್ನ ಜೀವದಾನ ಮಾಡ್ದ ರಾಜುಗೆ ವಂದನೆ ಹೇಳದೆ, ಅಥವಾ ತನ್ನ ಕಥೆನ ವಿಷಯನ ಹೇಳದೆ ಕೊಸರಾಡಿಕಂಡ್ ಬುಡಿ ನನ್ನ, ಬುಟ್ಟುಬುಡಿ ನನ್ನ ನಾನ್ ಜೀವಸಹಿತ ಬದಕಿಕ್ಕಾಗದ್, ನಾನು ಸಾಯಕು ನಾನ್ ಈ ಭೂಮಿ ಮೇಲೆ ಇರ್‍ಕಾಗದ್ ತ್ತೇಳಿಕಂಡ್ ಇವನ ಕೈಯಿಂದ ಬುಡ್ಸಿ ಕಂಬೊಕೆ ಕೊಸರಾಡ್‌ತಿತ್ತ್.

ಇಷ್ಟಾಕಾಕನ ಸೇತುವೆ ಮೇಲೆ ಹೋಗ ಬರೋ ಜನಂಗ, ಅಕ್ಕಪಕ್ಕದ ಆ ಊರುನ ಹುಡುಗರುಗ ಬಂದ್ ಸೇರಿದ್ರೊ. ಎಲ್ಲಾ ಕೆಳಗೆ ಬೊಗ್ಗಿ ನೋಡಿಕಂಡ್. ಏನಾಯ್ತು ಏನಾಯ್ತು? ಏಯ್ ಏನ್ ಮಾಡ್ತಾ ಇದ್ದೀಯಾ. ಆ ಹುಡ್ಗೀನಾ? ಅಂತ ಪ್ರಶ್ನೆ ಕೇಳಿಕೆ ಶುರು ಮಾಡ್ರೊ. ಅಷ್ಟೊತ್ತಿಗೆ ಕೆಲವು ಹುಡುಗರು ಕೆಳಗಡೆಗೆ ಓಡಿ ಹೋದ್ರೊ. ಏನ್ಲಾ? ಅವ್ಳನಾ ಬಲತ್ಕಾರ ಮಾಡ್ತಾ ಇದ್ದೀಯಾ? ಏಯ್ ದುಷ್ಟ. ಎರಡ್ ತದ್‌ಕಲ್ರಾ ಅಂವಂಗೆಂತ ಇವು ಕೂಗಾಡಿಕೆ ಶುರು ಮಾಡ್ರೊ. ಆಗ ಮೇಲೆ ನೋಡ್ತಾ ನಿಂತಿದ್ದ ಒಬ್ಬ ಅಜ್ಜ. ಹುಡುಗರನ್ನ ಕರ್ದ್ ಜೋರಾಗಿ ಹೇಳ್ತ್ ಥೇ ! ಬುಡ್ರಲಾ ಅವರನ್ನ ಆ ನೀರಲ್ಲಿ ಸಾಯುತಿದ್ದ ಹುಡ್ಗಿನ ಇವರು ಮೇಲಿಂದ ಧುಮುಕಿ ಆ ಹುಡ್ಗಿನ ಪ್ರಾಣನ ಕಾಪಾಡವ್ನೆ. ಏಯ್ ಎಲ್ಲರೂ ಸೇರಿ ಎತ್ತಿಕೊಂಡು ಬನ್ರೋ ಮೇಕೆ ಆ ಹುಡ್ಗಿನ. ಆಯಪ್ಪ ಇದ್ದಿದಕ್ಕೆ ನಮ್ಮ ಹುಡ್ಗಿ ಇವತ್ತು ಬಚಾವಾದ್ಲು ಅಂತ ಹೇಳಿದರು. ಈ ಮಾತ್‌ನ ಕೇಳ್ದ ಆ ಹೈದಂಗ ಸೇರಿಕಂಡ್ ರಾಜುನೊಟ್ಟಿಗೆ ಈ ಗೂಡೆನ ಹೊತ್ತ್‌ಕಂಡ್ ಮೇಲೆ ರಸ್ತೆ ಪಕ್ಕಕ್ಕೆ ಬಂದ್ರೊ. ಆಗ ಆ ಯಜಮಾನ ಅಜ್ಜ ಹತ್ರಕೆ ಬಂದ್ ಏನಮ್ಮ ಶಾಂತಿ, ತ್ತೇಳಿ ಅವಳ ಕೈನ ಹಿಡ್ಕಂಡ್ ಯಾಕೆ ಮೊಗಾ ನೀನ್ ಹಿಂಗೆ ಮಾಡ್ಕೊ ಬುಟ್ಟೆ? ಪಾಪ ಈ ಯಪ್ಪ ಆಗೋತ್ತಿಗೆ ನೀರಿಗೆ ಧುಮುಕಿ ನಿನ್ನ ಎತ್‌ಕೊಂಡ್ ಬಂದು ಪ್ರಾಣನ ಉಳ್ಸವನೆ. ಸಾಕ್ಷಾತ್ ಆ ನಂಜುಂಡೇಶ್ವರ ಸ್ವಾಮಿನೇ ಕಣವ್ವಾ ಈ ಹುಡುಗ !! ಅಂತ ಹೇಳಿ ರಾಜುನ ತಲೆ ಮೇಲೆ ಕೈ ಮಡಗಿ ನೇವರಿಸಿದ್ರೊ. ಆಗ ರಾಜು ಯಾರಜ್ಜಾ ಈ ಹುಡುಗಿ? ತ ಕೇಳ್ತ್. ಈ ಮಗಳು ನಮ್ಮ ಕೇರಿ ಕೆಂಪಣ್ಣನ ಹಿರಿಮಗಳು ಕಣಪ್ಪಾ, ಶಾಂತಿ ಅಂತ ಈಕೆಯ ಹೆಸ್ರು, ಈಕೆದು ಒಂದು ಕಾಲು ಕುಂಟು ಅಂತ ಬಂದಿದ್ದ ಗಂಡುಗಳೆಲ್ಲಾ ಬುಟ್ಟು ಬುಟ್ಟು ಹೋಗ್ತಾವ್ರೆ. ಈಕೆಗೆ ಎರಡು ಜನ ತಂಗಿಯರು ಕೂಡ ಇದ್ದಾವೆ. ಕೆಲವು ಗಂಡುಗಳು ಅಕ್ಕನ ಬುಟ್ಟು ತಂಗೀರ ಕೇಳ್ತಾವ್ರೇ. ಆ ಕೆಂಪಣ್ಣ ಹಿರಿಮಗ್ಗಳು ಬುಟ್ಟು ಕಿರಿಯವುಕೆ ಲಗ್ನ ಮಾಡುವಂಗೂ ಇಲ್ಲ. ಇಲ್ಲಾ ಇವಳ ಲಗ್ನ ಆಗುವಂಗೂ ಇಲ್ಲ ಕಣಪ್ಪ. ಅದಕ್ಕೆ ಇವ್ನ ಈ ಕೆಲ್ಸ ಮಾಡಿಕಂಡು ಬುಟ್ಲು ಕಣಪ್ಪ ಅಂತ ದುಃಖ ತಡಿಯಕೆ ಬೊತ್ತದೆ ಬಹಳ ಬೇಜಾರ್‌ಲಿ ಹೇಳ್ದ್ರೊ.

ಈ ಮಾತ್‌ನ ಕೇಳ್ಸಿಕಂಡ್ ಶಾಂತಿ ಗೂಡೆ ಬಿಡಿ ನನ್ನ ನಾನ್ ನನ್ನ ಅಪ್ಪ ಅವ್ವಂದಿರಿಗೂ ಭಾರ ಆಗಿ ಒಳೆ. ನನ್ನ ತಂಗಿಯರ ಬಾಳಿಗೂ ಅಡ್ಡ ವಾಗೊಳೆ. ನಾನ್ ಸತ್ತ್ ಹೋದ್ರೆ ಬೇರೆಯವಕ್ಕಾದ್ರೂ ದಾರಿ ಸಲೀಸಾಗಲಿತ್ತೇಳಿಕಂಡ್ ಪುನಃ ಕೊಸರಾಡಿಕೆ ಶುರು ಮಾಡ್ತ್. ಆಗ ಮಿಸ್ಟರ್ ರಾಜು ಅವಳ ತಲೆನ ನೇವರಿಸಿ ತನ್ನ ಎರಡೂ ಕೈಯಿಂದ ಅವಳ ಗಲ್ಲನ ಹಿಡ್ಡ್ ಎತ್ತಿ ಅವಳ ಹಣೆಗೆ ಮುತ್ತಿಕ್ಕಿ ಅವಳ ಕಿವಿ ಹತ್ರ ಮೆಲ್ಲಂಗೆ ಹೇಳ್ತ್ "ಶಾಂತಿ ನೀನ್ ಸಾಯಿಬೇಡ, ನೀನ್ ನಂಗೆ ಬೇಕ್. ನಾನ್ ನಿನ್ನನ ಮದ್ವೆ ಮಾಡಿಕಂಡನೆ. ಬರುವ ತಿಂಗಳ 15ನೇ ತಾರೀಕಿಗೆ. ಒಮ್ಮೆಗೆ ಆಶ್ಚರ್ಯ, ಸಂತೋಷ ಆಗಿ ಹೋತ್. ಕಣ್ಣ್‌ನೂ, ಬಾಯಿನೂ ಬುಟ್ಟ್‌ಕಂಡ್ ಅನುಮಾನಲಿ ನೋಡ್ತಿತ್. ಶಾಂತಿ ಇದ್ ಸತ್ಯ ಮರಿಬೇಡ. ಜೋಪಾನ ಆಗಿ ಅಲ್ಲಿವರ್ಗೂ ಇರ್. ನಾನೇ ನಿಮ್ಮ ಊರಿಗೆ ಬಂದ್ ನಿನ್ನನ ಕರ್ಕಂಡ್ ಹೋಗಿ ನಮ್ಮ ಊರ್‌ಲಿ ಮದ್ವೆ ಮಾಡಿಕಂಡನೆ. ನಿನ್ನ ನಂಗೆ ತುಂಬಾ ಇಷ್ಟ ಆಗುಟ್ಟು. ನನ್ನ ಮೇಲೆ ಅನುಮಾನ ಪಡ್‌ಬೇಡ. ಹೂಂ ಹೇಳು. ನಿಂಗೆ ಒಪ್ಪಿಗೆನಾ? ತಾಲವಳ ಕಣ್ಣ್‌ಲಿ ದೃಷ್ಟಿ ಇಟ್ಟ್ ಕೇಳ್ತ್. ಒಂದ್ ಘಳಿಗೆ ಶಾಂತಿನ ಮನ್ಸ್ ಭ್ರಮರ ಲೋಕಲಿ ವಿಹರಿಸಿಕೆ ಶುರ್ ಮಾಡ್ತ್. ಅವಳಿಗೆ ಆಸ್ತಿ, ಅಂತಸ್ತ್, ಸೌಭಾಗ್ಯಗಳ ಗೆದ್ದ್ ಕಂಡ ಒಂದ್ ತೃಪ್ತಿ ಆದಂಗೆ ಆತ್. ತುಂಬಾ ಖುಷೀಲಿ ಅವಳ ಕಣ್ಣ್‌ಗ ಅರಳಿದೊ. ಕಣ್ಣ್ ತುಂಬಾ ಸಂತೋಷಂದ ಕಣ್ಣೀರ್ ತುಂಬಿ ಬಂದಾಕನ ಅವಳಿಗೆ ಮುಖಿನ ತೋರ್ಸಿಕಾಗದೆ ನಾಚಿಕೆ ಆಗಿ ಹೋತ್. ಆದ್ರೂ ಧೈರ್ಯವಾಗಿ ಅವಳ ಮುಖಿನ ಅವನ ಶರಟ್‌ನ ಒಳಗೆ ಅವನ ವಿಶಾಲವಾದ ಎದೆ ಒಳಗೆ ತೂರಿಸಿ ಬುಟ್ಟ್ ತನ್ನ ಸರ್ವಸ್ವವನ್ನೂ ಅವನ ಹೃದಯಕ್ಕೆ ಸಮರ್ಪಿಸಿ ಕಂಡಂಗೆ ಬಾವೈಕ್ಯಳಾಗಿ ಒಂದ್ ನಿರಾಳವಾದ ಉಸ್‌ರ್ ಬುಟ್ಟು "ರಾಜ ನನ್ನ ರಾಜ" ನೀವು ಹೇಳುವುದು ಸತ್ಯ ತಾನೆ? ಅಂತ್ ಎದೆ ಒಳಗೆ ಪಿಸ್‌ಗುಟ್ಟಿತ್. ಈ ಧ್ವನಿ ಕೇಳ್ಡ್ ರಾಜುಗೆ ತುಂಬ ಖುಷಿ ಆಗಿಹೋತ್. ಅವಳ ಎರಡೂ ಕೆನ್ನೆಗಳ ಕೈಲಿ ಹಿಡ್ಡ್ ತನ್ನ ಕಡೆಗೆ ತಿರುಗಿಸಿಕಂಡ್ ನಿನ್ನಾಣೆಗೂ, ನನ್ನ ಅವ್ವನಾಣೆಗೂ ಸತ್ಯತ್ತೇಳಿ ಅವಳ ಹಣೆಗೆ ಲೊಚ ಲೊಚನೆ ಮುತ್ತ್‌ಕೊಟ್ಟ್ ಆಮೇಲೆ ಕೆನ್ನೆಗೊಂದ್ ಕಿಸ್ ಹೊಡ್ಡ್ ಮೇಲೆ ಎದ್ದ್ ನಿಂತ್ ತಿರುಗಿ ನೆಟ್ಟಂಗೆ ಅಲ್ಲಿಂದ ಹೊರಟ್ ನಡ್ಡೆ ಬುಡ್ತ್.

ಜೊತೆಲಿ ನಿಂತಿದ್ದ ಆ ತಾತಪ್ಪ ಅವಳ ಒದ್ದೆ ಸೀರೆ ನ ಹಿಡ್ಡ್ ಸರಿ ಮಾಡಿ ಬಾ, ಮಗಾ ಹೊಗಾನ ನಡಿತ್ತಾ ಹೇಳಿ ಅವಳ ಕೈ ಹಿಡ್ಕಂಡ್ ಮನೆ ಕಡೆಗೆ ಹೊರಟತ್. ಜನರ ಗುಂಪೊಳಗೆಂದ ತೂರಿಕಂಡ್ ಹೊರಗೆ ಬಂದ ರಾಜು ಯಾವ ಕಡೆಗೆ ಹೋತ್‌ತ್ತೇಳಿ ಯಾರಿಗೂ ಗೊತಾತ್‌ಲೆ. ಅಷ್ಟರಲ್ಲಿ ಅಲ್ಲಿ ಸೇರಿದ ಗುಂಪು ಜನ ರಾಜುನ ಧೈರ್ಯ, ಮತ್ತೆ ನಿಯತ್‌ನ ಹೊಗಳಿಕಂಡ್ ಅವಳ ಪ್ರಾಣನ ಉಳ್ಸಿದುದರ ಬಗ್ಗೆ ಚರ್ಚೆ ಮಾಡಿಕಂಡ್ ಮೆಲ್ಲ ಮೆಲ್ಲಂಗೆ ಜನರ ಗುಂಪು ಚದುರುತಾ ಇತ್.

ಇನ್ನೂ ಕೆಲವು ಜನ ಈ ರಾಜುನ ಧೈರ್ಯ, ದಯೆ, ಕರುಣೆ ತೋರ್ಸಿದುದರ ಬಗ್ಗೆ ಮಾತಾಡಿಕಂಡ್ ಈ ಹುಡ್ಗಿಯ ಕಾಲು ಕುಂಟ್ ಆಗಿದ್ರೂ ನಿನ್ನನ್ನು ಮದುವೆ ಆದನೆತ್ತೇಳಿ ಭರವಸೆ ಕೊಟ್ಟುದುದರ ಬಗ್ಗೆ ವಿಚಾರ ಮಾಡಿಕಂಡ್ ಇಂಥಹ ಒಬ್ಬ ತ್ಯಾಗಮಯಿ ಮನುಷ್ಯ ಎಲ್ಲಿನವ? ಅವನ ಹೆಸ್ರ್ ಏನ್? ಅಂವ ಯಾವ ಊರಂವ? ತ್ತೇಳಿ ತಿಳ್ಕೊಂಬಕ್ಕೋಸ್ಕರ ಅವನ ಸುತ್ತ ಮುತ್ತಾ ನೋಡಾಡಿದೊ. ಛೀ ಎಂಥಾ ಕೆಲ್ಸ ಆಗೋಯ್ತು ಇದೆಲ್ಲಾ ನಮ್ಮ ತಲೆಗೆ ಮೊದ್ಲೇ ಹೊಳ್‌ತ್‌ಲಲ್ಲಾ? ತಾ ಜ್ಞಾಪಿಸಿಕಂಡ್ ನೋಡಾಡುತಿದ್ದೊ.

ಆದ್ರೆ ಅಷ್ಟೊತ್ತಿಗಾಗಲೇ ಮಿ. ರಾಜು ಅಲ್ಲಿಂದ ದಾಟಿ ದೂರ ಹೋಗಿ ಆಗಿತ್ತ್.

(ಮುಂದ್‌ವರ್ದದೆ)

**ಶಂಕರನ ಬಸಪ್ಪ**

---

## A ಯಿಂದ Z ರವರೆಗೆ ಬರುವ ಗಂಡ ಹೆಂಡತಿಯರ Someಭಾಷಣೆ

Aನೇ ಮಲಗಿದ್ದೀಯಾ ಯಾಕೆ ಹುಷಾರಿಲ್ವ?
Bಡಿ ಮಾತಾಡಿಸಬೇಡಿ ನನ್ನ ಏನು ಹೇಳಿದ್ರಿ?
Cನಿಮಾಕ್ಕೆ ಕರೆದುಕೊಂಡು ಹೋಗ್ತಿನಿ ಅಂತ
Dಯರ್ ಇಷ್ಟಕ್ಕೆ 'ಕೋಪಾನ' ನಾನು ಏನೋ ಅನ್ಕೊಂಡಿದ್ದೆ
Eಷ್ಟಕ್ಕೆ ಯಾಕ್ರಿ ಕೋಪ ನಾನು ಈವಾಗ ಹೋಗಲೇ ಬೇಕು
First ಊಟ ಮಾಡು ಆಮೇಲೆ ಹೋಗೋಣ.
Gಪುಣ ಅನ್ಕೊಂಡಿದ್ದೆ ಪರವಾಗಿಲ್ಲ ನೀವು
Hಗೆ ಮಾತಾಡಬೇಡ, ಈವಾಗ ಬಾ ಸುಮ್ನೆ
Iಯ್ಯೊ! ನಡೀರಿ ಬೇಗ !ಲೇಟಾಗುತ್ತೆ.
Jಬಿನಲ್ಲಿ ಸ್ವಲ್ಪನೂ ದುಡ್ಡು ಇಲ್ಲ ತಾಳೂ ಬಂದೆ.
Kಳಗಡೆ ಇರ್ತಿನಿ ಬೇಗ ಬನ್ನಿ.
Lಲ್ಲಿಗಾದ್ರೂ ಹೋಗಬೇಕಾದ್ರೆ ಹೀಗೆ ಲೇಟು
Mಬತ್ತು ರೂಪಾಯಿ ಇದೆ. ಅಷ್ಟೇ ಕಣೆ.
Nತಾದ್ರಿ ನಿಮ್ಮದು. ಯಾವಾಗ್ಲೂ ಒಂದೇ
Oಹೋ ನೀನೇನು ಸಾಹುಕಾರ್‌ನ ಮಗಳು ನೋಡು?
Pಕ್ಚರ್‌ಗೆ ಟಿಕೇಟ್ ಕೊಡ್ತಾ ಇರಬಹುದು ಬೇಗ ಬನ್ನಿ ಆಯ್ತು.
Qನಲ್ಲಿ ನಿಂತಿಕೋ ಬಾರೇ, ಅಲ್ಲೇನು ನೋಡ್ತಾ ಇದ್ದೀಯಾ?
R ರೂಪಾಯಿ ಕೊಡ್ರಿ ಹೂವ ತಗೋ ಬರ್ತೀನಿ
Sಷ್ಟೇ ಮಾಡಿದ್ರೂ ನಿನ್ನ ಬುದ್ಧಿ ಬಿಡಲ್ವೆ.
Tಕೆಟ್ ತಗೋತಾ ಇರಿ, ಬೇಗ ಬರ್ತೀನಿ. ಐದು ನಿಮಿಷ ಬಂದೆ.
Uಸ್‌ಲೆಸ್ ಕಣೆ ನೀನು ಇಷ್ಟೊತ್ತಾ ಬರೋದು?
Vಷಯ ಏನ್ರೀ ಯಾಕೆ. ಏನಾಯಿತು?
Wರೋಲ್ ಕಣೆ ಆವಾಗ್ಲೆ. ಏನ್ ಮಾಡೂದು ಈಗ?
Xಟ್ರಾ ದುಡ್ಡಾದ್ರು ಕೊಟ್ಟು ಹೋಗೋಣ ಬನ್ನಿ ಮತ್ತೆ.
Yಯ್ಯಾರ ಮಾಡ್‌ಕೊಂಡು ಬರಾದೇ ಆಯ್ತು ನಿಂದು
Zರೋಲ್ ಆದ್ರೆ ನಮಗೇನು ನಾನು ಸಿನಿಮಾ ನೋಡಲೆ ಬೇಕು ಬನ್ನಿ, ಹೋಗೋಣ

ಚಾರನ ದಿವ್ಯ ಅಪ್ಪಾಜಿ, ಮಡಿಕೇರಿ

---

# MATRIMONIAL MEET

ಎಪ್ರಿಲ್ ತಿಂಗಳಿನ 9ನೇ ತಾರೀಖಿನ ಮುಸ್ಸಂಜೆ. ಬೆಂಗಳೂರಿನ ಒಂದು ವರದಿ. M.G.ರಸ್ತೆಯಲ್ಲಿನ ರಂಗುರಂಗಿನ ದೀಪಗಳು ಬೆಳಗಲಾರಂಭಿಸುತ್ತಲೆ, ಅಜಂತಾ ಹೋಟೆಲಿನ 'ಸ್ವಾತಿ' ಸಭಾಂಗಣದಲ್ಲಿ ಗೌಡ ಭಾಂದವರು ಗುಂಪು ಗುಂಪಾಗಿ ಬಂದು ಸೇರಿದರು. ಸಂಧರ್ಭ- '**ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ**'ದ ವತಿಯಿಂದ ಬೆಂಗಳೂರಿನಲ್ಲಿ ನಡೆದ ಮೊಟ್ಟ ಮೊದಲನೆಯ ವಧುವರರ ಮುಖಾಮುಖಿ ಸಮಾವೇಶ.

ಮಧುವೆಯ ಭಾಂಧವ್ಯದ ಬೆಸುಗೆಯ ಆಸೆ ಹೊತ್ತ ಹರೆಯದ ಹೃದಯಗಳು, ಅವರೊಡನೆ ಅವರ ತಂದೆ-ತಾಯಿ, ಅಣ್ಣ, ತಮ್ಮ, ಅಕ್ಕ-ತಂಗಿ ಹಾಗೂ ಗೆಳೆಯ-ಗೆಳತಿಯರೂ ಬಂದು ಸೇರಿದರು. ಯುವಕ ಯುವತಿಯರ ಮನದಲ್ಲಿ ಮೂಡಿದ್ದ ಸಂಕೋಚ ಹಾಗೂ ದುಗುಡವನ್ನು ಅಲ್ಲಿನ ಸ್ನೇಹಮಯ ವಾತಾವರಣ ಮಾಯವಾಗಿರಿಸಿತು.

ಒಟ್ಟಾರೆ ಸುಮಾರು 250 ಜನರು ಬಂದು ಸೇರಿದ್ದರು. 50-60 ಮಂದಿ ವಧು ವರರಲ್ಲಿ ವಧುಗಳ ಸಂಖ್ಯೆಯೇ ಜಾಸ್ತಿಯಿತ್ತು. ಬೆಂಗಳೂರು ಅಲ್ಲದೆ ಮೈಸೂರು ಹಾಗು ಕೊಡಗಿನಿಂದ ಅನೇಕ ವಿದ್ಯಾವಂತ, ಉದ್ಯೋಗಸ್ಥ ವಧುವರರು ಬಂದಿದ್ದರು. ಹೊರ ದೇಶದಲ್ಲಿ ನೆಲೆಸಿರುವ ಮಕ್ಕಳ ತಂದೆ ತಾಯಿಯಂದಿರೂ ಬಂದು ಸೇರಿದ್ದರು. ಪ್ರತಿಯೊಬ್ಬ ವಧು-ವರರನ್ನು ವೇದಿಕೆಗೆ ಕರೆಯಿಸಿ ಅವರ **ಕಿರುಪರಿಚಯವನ್ನು** ನೀಡಲಾಯಿತು. ವಧು-ವರರು ಬಿಚ್ಚು ಮನಸ್ಸಿನಿಂದ ತಾವೇ ಮುಂದಾಗಿ ಸ್ವಪರಿಚಯ ಮಾಡಿಕೊಟ್ಟರು. **ಶ್ರೀಮತಿ ಸುಳ್ಳಕೋಡಿ ವೈಶಾಲಿ ಅಮರ್‌ನಾಥ್, ಶ್ರೀ T.M. ಕಾವೇರಿಯಪ್ಪ ಹಾಗೂ ಶ್ರೀ ನಂಗಾರು ಲಿಂಗರಾಜುರವರ** ಸುಸೂತ್ರ ನಿರ್ವಹಣೆ ಕಾರ್ಯಕ್ರಮಕ್ಕೆ ಮೆರಗು ನೀಡಿತು. ವೇದಿಕೆಯ ಮೇಲೆ ನೆರೆದ ಗಣ್ಯ ಅತಿಥಿಗಳಲ್ಲಿ **ಡಾ. K.M. ಬೋಜಪ್ಪನವರು, ಶ್ರೀಮಾನ್ ತಮ್ಮಪ್ಪ ಗೌಡರು, ಶ್ರೀಮಾನ್ ದಂಬೆಕೋಡಿ ಆನಂದ್‌ರವರು, ಶ್ರೀಮಾನ್ P.K. ಪೂವಯ್ಯನವರು** ಹಾಗೂ **ಪ್ರೊ. ಪೂಜಾರೀರ ಮೊಣ್ಣಪ್ಪನವರು** ಪ್ರಮುಖರು.

ವಧುವರರ ಪರಿಚಯ, ವಿಳಾಸ ಹಾಗೂ ದೂರವಾಣಿ ಸಂಖ್ಯೆಗಳ ವಿನಿಮಯ ಮುಗಿದ ಬಳಿಕ ನಡೆದ ಚಿಕ್ಕ ಸಂತೋಷ ಕೂಟವು, ನೆರೆದ ಮಂದಿಯನ್ನು ಇನ್ನಷ್ಟು ಹತ್ತಿರವಾಗಿರಿಸಲು ಸಹಾಯಮಾಡಿತು. ನಮ್ಮ ಜನಾಂಗದ ವಧು-ವರರನ್ನು ಸಂಗಾತಿಯಾಗಲಿಚ್ಚಿಸಿ ಒಕ್ಕಲಿಗರು, ಲಿಂಗಾಯಿತರು, ಬ್ರಾಹ್ಮಣೇತರ ಅಭ್ಯರ್ಥಿಗಳೂ ತಮ್ಮ ಹೆಸರನ್ನು ನೊಂದಾಯಿಸಿಕೊಳ್ಳಲು ಮುಂದಾಗಿದ್ದರು ಎಂಬುದು ಗಮನಾರ್ಹ. ಚಿರಪರಿಚಿತರಾದ ಅಪ್ಪಾಜೀರ ಪೊನ್ನಪ್ಪನವರು ವಂದನಾರ್ಪಣೆ ಮಾಡಿ ಕಾರ್ಯಕ್ರಮವನ್ನು ಮುಗಿಸಿದರು.

ನಮ್ಮ ಸಂಘದ ವತಿಯಿಂದ ನಡೆದ ಈ ಯಶಸ್ವೀ ಸಮಾವೇಶ ನಿಜವಾಗಿಯೂ ಗೌಡ ಭಾಂದವರಿಗೊಂದು ಸುವರ್ಣಾವಕಾಶವಾಗಿತ್ತು. Every long journey begins with a single step ಸಂಘದ ವತಿಯಿಂದ ಇಟ್ಟಿರುವ ಈ ಪುಟ್ಟ ಹೆಜ್ಜೆ ದಾಪುಗಾಲು ಹಾಕುತ್ತಾ ಮುನ್ನಡೆಯಬೇಕು. ಈ ಕಾರ್ಯಕ್ರಮವನ್ನು ಇಷ್ಟಕ್ಕೇ ನಿಲ್ಲಿಸದೆ ಇನ್ನೂ ದೊಡ್ಡ ಪ್ರಮಾಣದಲ್ಲಿ ಶೀಘ್ರದಲ್ಲೇ ಮತ್ತೆ ಹಮ್ಮಿಕೊಳ್ಳಬೇಕು ಎಂದು ನಮ್ಮೆಲ್ಲರ ಆಶಯ.

**ವರದಿ : ಎಡಿಕೇರಿ ಸುದರ್ಶನ್, ಬೆಂಗಳೂರು.**

**ಸಮಾಜವತಿಯಿಂದ ನಡೆದ ಈ ಮೇಲಿನ ವಧುವರರ ಮುಖಾಮುಖಿ ಕಾರ್ಯಕ್ರಮಕ್ಕೆ ಜಯವಾಗಲಿ**

---

## ಶ್ರೀ ಕೆದಂಬಾಡಿ ಸಂಣಪ್ಪನವರಿಂದ ಕುಶಾಲನಗರ ಮಾಜಿ ಸೈನಿಕರ ಸಂಘಕ್ಕೆ ಉದಾರ ನಿವೇಶನ ನೀಡಿಕೆ.

ದಿನಾಂಕ 16-4-2000ರಲ್ಲಿ ಗುಮ್ಮನ ಕೊಲ್ಲಿ ಗ್ರಾಮದ ನಿವಾಸಿ ಮಾಜಿ ಸೈನಿಕ ಕೆದಂಬಾಡಿ ಎಸ್ ಸಣ್ಣಪ್ಪನವರು ಉದಾರವಾಗಿ ನೀಡಿದ ನಿವೇಶನದಲ್ಲಿ ಕುಶಾಲನಗರ ಮಾಜಿ ಸೈನಿಕರ ಸಂಘದವರಿಂದ ದಾನಿಗಳಿಗೆ ಸನ್ಮಾನ ಸಮಾರಂಭ ಏರ್ಪಡಿಸಲಾಗಿತ್ತು.

ತಮ್ಮದೇ ಆದ ಸ್ವಂತ ಕಟ್ಟಡವನ್ನು ಹೊಂದುವ ಸಲುವಾಗಿ ಮಾಜಿ ಸೈನಿಕರಿಂದ ಸಂಘ ಖಾಲಿ ಜಾಗಕ್ಕಾಗಿ ಜಿಲ್ಲಾಡಳಿತಕ್ಕೆ ಕಳೆದ ಕೆಲ ವರ್ಷಗಳಿಂದ ಆಗ್ರಹಿಸುತ್ತಿದ್ದರೂ ಯಾವುದೇ ಫಲ ಕಾಣಲಿಲ್ಲ. ಇದನ್ನು ಮನಗಂಡ ಮಾಜಿ ಸೈನಿಕರರಾದ ಕೆದಂಬಾಡಿ ಸಣ್ಣಪ್ಪನವರು 5ಸೆಂಟು ಜಾಗವನ್ನು ಸಂಘಕ್ಕೆ ಉದಾರವಾಗಿ ನೀಡಿದ್ದರು.

ಮುಳ್ಳುಸೋಗೆ ಗ್ರಾಮ ಪಂಚಾಯ್ತಿಯ ಪ್ರದಾನ ಶ್ರೀ ಗಣೇಶ ಅವರ ಅಧ್ಯಕ್ಷತೆಯಲ್ಲಿ, ನ್ಯಾಯವಾದಿ ತೆಕ್ಕಡೆ ನೇಮಿರಾಜ ಅವರು ದಾನಿಗಳಾದ ಸಣ್ಣಪ್ಪನವರಿಂದ ದಾನಪತ್ರವನ್ನು ಸಂಘದ ಅಧ್ಯಕ್ಷ ಕ್ಯಾಪ್ಟನ್ ಭಾಸ್ಕರ್ ಅವರಿಗೆ ಹಸ್ತಾಂತರಿಸಿದರು.

### ಸನ್ಮಾನ

ಇದೇ ಸಂದರ್ಭದಲ್ಲಿ ಕ್ಯಾಪ್ಟನ್ ಮುಳುವಂಡ ಪಳಂಗಪ್ಪನವರು ದಾನಿಗಳಿಗೆ ಶಾಲುಹೊದಿಸಿ ಸನ್ಮಾನಿಸಿದರು.

ಸಭೆಯನ್ನು ಕ್ಯಾಪ್ಟನ್ ತೋಟಂಬೈಲು ಪ್ರಭಾಕರ್, ಪಿ.ಟಿ. ಬೋಪಣ್ಣ, Rt. DySP ಕಾಳೇರಮ್ಮನ ನಾಣಯ್ಯ, ಕ್ವಾನೆಹಿತ್ಲು ನಂಜಪ್ಪ, ಕುದುಪಜೆ ಬೋಜಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಕುಂಭಗೌಡನ ಸೋಮಣ್ಣನವರು ಕಾರ್ಯ ಕ್ರಮವನ್ನು ನಿರೂಪಿಸಿ ಕೊನೆಗೆ ವಂದಾನಾರ್ಪಣೆ ಸಲ್ಲಿಸಿದರು

ವರದಿ. ಕೆ. ಸಿ. ಸೋಮಣ್ಣ, ಕುಶಾಲನಗರ.

---

ನಂಬಿದ ದೈವವನ್ನು ಕಡೆ ಕಾಲದ ತನಕವು ನೆನೆಯು

# COOL DRINKSನ ದುಷ್ಪರಿಣಾಮ

ಬೇಸಿಗೆ ಬಂತೆಂದರೆ ಬಿಸಿಲಿನ ಬೇಗೆ, ಕೆಂಡದಂತೆ ಉರಿಯುವ ಸೂರ್ಯನ ತಾಪ, ಶೆಖೆ, ಬೆವರು, ಇದೆಲ್ಲದರ ಜೊತೆಗೆ ಆಗಾಧವಾದ ಬಾಯಾರಿಕೆ. ಎಷ್ಟು ನೀರು ಕುಡಿದರೂ ಕುಡಿದ ನೀರು ಇಂಗಿ ಹೋಗಿ ಹೊಟ್ಟೆ ಬತ್ತಿಹೋದ ಅನುಭವವಾಗುವುದು. ತಂಪಾಗಿ ಏನನ್ನಾದರು ಕುಡಿಯುತ್ತಲೇ ಇರಬೇಕೆಂಬ ಬಯಕೆಯಾಗುತ್ತದೆ. ಆತಂಕವೇ ಬೇಡ. ಮನೆಯಲ್ಲಿ ಫ್ರಿಜ್‌ನಲ್ಲಿ ಕ್ರೇಟ್‌ಗಟ್ಟಲೆ Pepsi/Cococolaಗಳು ತುಂಬಿರುತ್ತವಲ್ಲಾ. ತಂಪು ಪಾನೀಯಗಳ ತವರುಮನೆಯ ರಾಜ-ರಾಣಿಗಳಾದ ಆ ತಂಪು ಪೇಯವನ್ನು ಗುಟಕರಿಸುತ್ತಲೇ ಎಂತಹ ಆಹ್ಲಾದಕರ ಅನುಭವ ! ಸಿನಿಮಾಕ್ಕೆ ಹೋಗಲಿ, ಪಾರ್ಟಿ ಅಥವಾ ಪಿಕ್‌ನಿಕ್ಕೇ ಆಗಲಿ Cool Drinks ಇರದಿದ್ದರೆ ಉಂಟೇ?!

ಈ ಸಾಫ್ಟ್ ಡ್ರಿಂಕ್ಸ್ ನಮಗೆ ಕ್ಷಣಿಕ ತೃಪ್ತಿ ಮಾತ್ರ ತಂದುಕೊಡುತ್ತದೆ. ಇವುಗಳಿಂದ ಆರೋಗ್ಯಕ್ಕೆ ಆಗುವ ಅಪಾರವಾದ ಹಾನಿಗಳನ್ನು ಕೆಲವೇ ಜನರು ಬಲ್ಲರು

1.5ಲೀಟರ್‌ನ ಒಂದು Coco-Cola ಬಾಟಲಿನ Wrapperನ್ನು ಓದಿ. Cokeನಲ್ಲಿ Phosphoric acid ಬಳಸಿರುತ್ತಾರೆ. ಸಣ್ಣ ಪ್ರಮಾಣದ Ethylene Glycol ಬಳಕೆಯಿಂದ ಈ ಪೇಯವನ್ನು 4-5$^0$ celsiusಗೆ ಗಡ್ಡೆ ಕಟ್ಟುವಂತೆ ಮಾಡಲಾಗುವುದು. ಈ ರೀತಿ ಪೇಯಗಳನ್ನು ಶೀತಲೀಕರಿಸುವ ವಿಧಾನಕ್ಕೆ 'Soft-Drinks' ಲೋಕದಲ್ಲಿ "Anti-Freezing" ಎನ್ನುತ್ತಾರೆ. Ethylene Glycol ಅನ್ನು ರಸಾಯನಿಕ ತಜ್ಞರು ' Slow Poison'ಗಳಲ್ಲಿ ಒಂದು ಎಂದು ವಿಂಗಡಿಸುವರು.

ನೀವು Cool drinks ಕುಡಿದು ಸಾಯಲು ಬಯಸುವುದಾದರೆ, 1ಗಂಟೆಯ ಒಳಗೆ 4ಲೀಟರ್ Coke/Pepsi ಕುಡಿದು ಮುಗಿಸಿರಿ! ಈ ಪೇಯಗಳಲ್ಲಿನ ಸಾಂದ್ರತೆ(PH) 3.4! ಇಷ್ಟು ಪ್ರಬಲವಾದ acidity ಮನುಷ್ಯನ ಹಲ್ಲು ಹಾಗೂ ಮೂಳೆಗಳನ್ನು ಕರಗಿಸಿಬಿಡಬಲ್ಲದು. Soft drinksನಲ್ಲಿ ಯಾವುದೇ ಬಗೆಯ ಪುಷ್ಟಿದಾಯಕ (Nutrition)ಗಳಾಗಲಿ, ಸತ್ವಾಂಶ(Vitamin)ಗಳಾಗಲಿ, ಸಸಾರಜನಕ (Proteins) ಗಳಾಗಲಿ ಇರುವುದಿಲ್ಲ. ಬದಲಾಗಿ ಅತಿಯಾಗಿ ಸಕ್ಕರೆ, Carbonic acid, ರಾಸಾಯನಿಕ ಹಾಗೂ ಕೃತಕ ಬಣ್ಣಗಳು ಇರುತ್ತದೆ. ಕೆಲವರಿಗೆ, ಊಟವಾದ ತಕ್ಷಣ Cool drinks ಕುಡಿಯುವ ಅಭ್ಯಾಸ. ಅದರ ಪರಿಣಾಮವೇನು? ನಮ್ಮ ದೇಹದಲ್ಲಿನ ಆಹಾರ ಜೀರ್ಣವಾಗಲು ಜೀರ್ಣಕೋಶಗಳಿಗೆ (Enzymes) 37$^0$ celsius ಉಷ್ಣಾಂಶ ಅಗತ್ಯವಾಗಿರುತ್ತದೆ. Cool drinks ನಿಂದಾಗಿ ಈ Enzymesನ ಜೀರ್ಣಶಕ್ತಿಯು ಕುಗ್ಗಿ, ಅಜೀರ್ಣತೆ ಯಾಗುವುದಲ್ಲದೆ, ತಿಂದ ಆಹಾರ ಹುಳಿಯಾಗುತ್ತದೆ (Fermentation) ಹುಳಿ ಆಹಾರದಲ್ಲಿ gasಉತ್ಪತ್ತಿಯಾಗಿ ಆಹಾರ ಕೊಳೆತು ವಿಷಮಯವಾಗಿ ರಕ್ತದಲ್ಲಿ ಬೆರೆತು, ದೇಹದಲ್ಲೆಡೆ ಸಂಚರಿಸಿ ಕಾಯಿಲೆಯನ್ನುಂಟುಮಾಡುತ್ತದೆ.

ಪ್ರತಿಬಾರಿ ನೀವು Cool drinks ಗುಟುಕರಿಸುವಾಗಲೂ ನೀವು(Carbondi-oxide) ಇಂಗಾಲವನ್ನು ಹೊಟ್ಟೆಗೆ ಸೇರಿಸುತ್ತಿದ್ದೀರಿ ಎಂದು ನೆನಪಿಟ್ಟುಕೊಳ್ಳಿ. ಒಂದೆರಡು ತಿಂಗಳ ಹಿಂದೆಯಷ್ಟೇ ನವದೆಹಲಿಯ ಒಂದು ವಿಶ್ವವಿದ್ಯಾನಿಲಯದಲ್ಲಿ ಒಂದು ಸ್ಪರ್ಧೆ ನಡೆಯಿತು. "ಯಾರು ಕಡಿಮೆ ಸಮಯದಲ್ಲಿ ಅತಿ ಹೆಚ್ಚು ಬಾಟಲಿ Coke ಕುಡಿಯುತ್ತಾರೆ?" ಗೆದ್ದ ವಿದ್ಯಾರ್ಥಿ 8 ಬಾಟಲಿ Coke ಕುಡಿದು ಸ್ಥಳದಲ್ಲೇ ಪ್ರಜ್ಞೆ ತಪ್ಪಿ ಬಿದ್ದ. ಕೂಡಲೆ ಅವನನ್ನು ಆಸ್ಪತ್ರೆಗೆ ಸೇರಿಸಲಾಯಿತು. ಕಾರಣ - ಆತನ ರಕ್ತದಲ್ಲಿ ಆಮ್ಲಜನಕಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ C02 ಇರುವಿಕೆ. ಈ ಘಟನೆ ನಡೆದ ಮರುಕ್ಷಣವೇ ಪ್ರಿನ್ಸಿಪಾಲರು ಅಲ್ಲಿನ Canteenನಲ್ಲಿ Cool drinks ಮಾರುವುದನ್ನು ನಿಷೇಧಿಸಿಬಿಟ್ಟರು. ಇದು ಅತಿರೇಕದ ನಿರ್ಧಾರವಾದರೂ, ಈ ಘಟನೆ ನಮ್ಮನ್ನು ಯೋಚಿಸಲು ಪ್ರೇರೆಪಿಸುವುದಂತು ನಿಜ.

ಆದ್ದರಿಂದ, ಆದಷ್ಟು ನಾವು ಕೃತಕ ರಾಸಾಯನಿಕ ಪೇಯಗಳ ಬದಲಾಗಿ ಹಾಲು, ಮಜ್ಜಿಗೆ, ಎಳನೀರು, ಹಣ್ಣಿನ ರಸ ಅಥವಾ ಬರೀ ನೀರಿನಿಂದ ಬಾಯಾರಿಕೆಯನ್ನು ಉಪಶಮನ ಮಾಡಿ ಕೊಳ್ಳುವುದರಲ್ಲೆ ಒಳಿತು. ಮನುಷ್ಯ ಸತ್ತ ನಂತರ ಆತನ ದೇಹ ಕೊಳೆತರೂ, ಆತನ ಹಲ್ಲು ಮತ್ತು ಮೂಳೆಗಳು ಅನೇಕ ವರ್ಷಕಾಲ ಗಟ್ಟಿಯಾಗಿಯೇ ಉಳಿಯುತ್ತವೆ. ಆದರೆ ಈ ಪೇಯಗಳು ಮೂಳೆಯಲ್ಲಿನ Calcium ಪ್ರಮಾಣವನ್ನು ಕುಗ್ಗಿಸಿ, ಹುಳುಕು ಮಾಡಿ ಮೂಳೆ ಬಲ ಕಳೆದುಕೊಂಡು ಸವೆಯುವಂತೆ ಮಾಡುತ್ತದೆ. ಈ ಕಾಯಿಲೆಗೆ osteoporosis ಎಂದೂ ಕರೆಯುತ್ತಾರೆ. ಮೂಳೆಗಳ ಗತಿಯೇ ಹೀಗಾದರೆ ನಮ್ಮ ಕರಳು ಹಾಗೂ ಹೊಟ್ಟೆಯ ತೆಳು ಪದರದ ಗತಿಯೇನಾಗಬಹುದು, ಯೋಚಿಸಿ.

ಇನ್ನೂ ನಿಮಗೆ ನಂಬಿಕೆ ಬರದಿದ್ದರೆ ಒಂದು Pepsi ಬಾಟಲಿಯೊಳಗೆ ಒಂದು ಹಲ್ಲಿನ ಚೂರನ್ನು ಹಾಕಿ ಫ್ರಿಜ್‌ನಲ್ಲಿಟ್ಟು 10ದಿನಗಳ ನಂತರ ತೆಗೆದು ನೋಡಿ, ಅದರ ಗತಿ ಏನಾಗಿರುತ್ತದೆ.

- ಎಡಿಕೇರಿ ಸುದರ್ಶನ್, ಬೆಂಗಳೂರು

---

**ಕೊಡಗು ಸಂಗಾತಿ**

ಓ ನನ್ನ ಸಂಗಾತಿ,
ನೀನಾಗು ನನ್ನ ಬಾಳ ಸಂಗಾತಿ,
ನಿನಗಾಗಿ ಕಾದಿದೆ ನನ್ನ ತನುಮನ,
ನೀನಿಲ್ಲದಿದ್ದರೆ. ನನಗಾಗುವುದು ನಿರಾಸೆ,
ಆಗುವುದು ನನ್ನ ಜೀವನ ಅಧೋಗತಿ!
**ಕೊಡಗು ಸಂಗಾತಿಗೆ,** ಹೊಸ ವರುಷದ
ಶುಭಾಶಯಗಳು ಹಾಗೂ ಧನ್ಯವಾದಗಳು
ಅಮೆಮನೆ ನವೀನ್, ಮಡಿಕೇರಿ.

# ವ್ಯಕ್ತಿ ಪರಿಚಯ :



ದಿವಂಗತ ಬೆಪ್ಪುರನ ಪಳಂಗಪ್ಪ

ಸಮಯಪಾಲನೆ, ಪ್ರಾಮಾಣಿಕತೆ, ಕಾರ್ಯದಕ್ಷತೆ, ಕರ್ತವ್ಯನಿಷ್ಠೆ, ಸೇವಾಕಾಂಕ್ಷೆ, ಸ್ನೇಹಪರತೆ, ಸರಳತೆ ಇವುಗಳನ್ನು ಮೈಗೂಡಿಸಿಕೊಂಡು ಸರ್ಕಾರಿ ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಸಾರ್ಥಕ ಸೇವೆ ಸಲ್ಲಿಸಿದ ದಿವಂಗತ ಬೆಪ್ಪುರನ ಪಳಂಗಪ್ಪನವರನ್ನು ಸಮಾಜ ಬಾಂಧವರಿಗೆ ಪರಿಚಯಿಸಲು ಹರ್ಷವಾಗುತ್ತದೆ.

ಶ್ರೀಯುತರು ಮಡಿಕೇರಿ ತಾಲ್ಲೂಕು ಹೆರವನಾಡು ಗ್ರಾಮದ ಬೆಪ್ಪುರನ ತಿಮ್ಮಯ್ಯ ಹಾಗೂ ಮುದ್ದವ್ವ ದಂಪತಿಗಳ ಪ್ರಥಮ ಪುತ್ರರಾಗಿ 1919ನೇ ಏಪ್ರಿಲ್ 13ರಂದು ಜನಿಸಿದರು. ಶ್ರೀಯುತರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಕೊಟ್ಟೂರಿನಲ್ಲಿ ಮುಗಿಸಿ, 1943ರಲ್ಲಿ ಕೊಳಗದಾಳು ಗ್ರಾಮದ ಮುಕ್ಕಾಟಿ ದಿವಂಗತ ಮೇದಪ್ಪ ಹಾಗೂ ಅಚ್ಚವ್ವನವರ ಪ್ರಥಮ ಪುತ್ರಿ ಸೀತಮ್ಮನವರನ್ನು ವಿವಾಹವಾದರು. ಶ್ರೀಯುತರು 2ನೇ ಪ್ರಪಂಚ ಯುದ್ಧದ ಸಮಯದಲ್ಲಿ ರಕ್ಷಣಾ ಪಡೆಯಲ್ಲಿ (1943-1948) ಸೇವೆ ಸಲ್ಲಿಸಿದರು. ರಕ್ಷಣಾ ಸೇವೆಯ ನಂತರ ಶ್ರೀಯುತರು, ಸರಕಾರಿ ಸೇವೆಗೆ ಸೇರಿದರು. ಮೇಲ್ಮಟ್ಟದ ಶಿಕ್ಷಣ ದೊರೆಯದಿದ್ದರೂ, ಬುದ್ಧಿಮತ್ತೆ, ಕಾರ್ಯದಕ್ಷತೆಗೆ ಹೆಸರಾದ ಇವರು ಅಲ್ಪ ಸಮಯದಲ್ಲಿಯೇ ಉನ್ನತ ಹುದ್ದೆಗೆ ಬಡ್ತಿಯನ್ನು ಪಡೆದರು. ಶ್ರೀಯುತರು ಲೋಕೋಪಯೋಗಿ ಇಲಾಖೆಯಲ್ಲಿ ಅಭಿಯಂತರಾಗಿ ಸೇವೆ ಸಲ್ಲಿಸುತ್ತಿದ್ದು 1974ರಲ್ಲಿ ನಿವೃತ್ತರಾದರು. ಅವರು ಸೇವೆಯಲ್ಲಿದ್ದಷ್ಟು ಕಾಲ ತಮ್ಮ ಮೇಲಧಿಕಾರಿಗಳು ಹಾಗೂ ಕೈಕೆಳಗಿನವರೊಡನೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಸಾರ್ವಜನಿಕರು ಹಾಗೂ ಇವರ ಮೇಲಧಿಕಾರಿಗಳು ತೋರುತ್ತಿದ್ದ ಪ್ರೀತಿ, ವಿಶ್ವಾಸ, ಇವರ ಕಾರ್ಯದಕ್ಷತೆ, ಅನುಭವ ಹಾಗೂ ಪ್ರಾಮಾಣಿಕತೆಗೆ ಸಂದ ಕೊಡುಗೆಯೆಂದರೆ ತಪ್ಪಾಗಲಾರದು. ನಿವೃತ್ತಿಯ ನಂತರವೂ ಸಹ ತಮ್ಮ ಸೇವಾವಧಿಯಲ್ಲಿ ಯಾವ ಶಿಸ್ತು ಮತ್ತು ನಿಯಮಗಳನ್ನು ಅಳವಡಿಸಿಕೊಂಡಿದ್ದರೊ ಅವುಗಳನ್ನು ತಮ್ಮ ನಿಜ ಜೀವನದಲ್ಲಿಯೂ ಅಳವಡಿಸಿ ಕೊಂಡಿದ್ದರು ಮಾತ್ರವಲ್ಲ, ಇತರರೂ ಅವರಂತೆ ನಡೆದುಕೊಳ್ಳಲು ಬಯಸಿದರು. ಶ್ರೀಯುತರು ಸಾರ್ವಜನಿಕ ಕ್ಷೇತ್ರದಲ್ಲಿಯೂ ಅಷ್ಟೇ ದಕ್ಷತೆಯಿಂದ ದುಡಿದವರು. ಶ್ರೀಯುತರು ಗ್ರಾಮಪಂಚಾಯತ್ ಛೇರ್‌ಮನ್‌ರಾಗಿ, ಹೆರವನಾಡು ಗ್ರಾಮದ ದವಸ ಭಂಡಾರದ ಅಧ್ಯಕ್ಷರಾಗಿಯೂ ಉತ್ತಮ ಸೇವೆ ಸಲ್ಲಿಸಿದುದ್ದಲ್ಲದೆ ಪ್ರಾಥಮಿಕ ಶಾಲಾ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಗ್ರಾಮದ ಶ್ರೇಯೋಭಿವೃದ್ಧಿಗಾಗಿ ಉತ್ತಮ ಸೇವೆ ಸಲ್ಲಿಸಿ ಸಾರ್ವಜನಿಕರ ಮೆಚ್ಚುಗೆಗೆ ಪಾತ್ರರಾದರು. ಶ್ರೀಯುತರು ಸಮಾಜದ ಏಳಿಗೆಗಾಗಿಯೂ ಸರಕಾರಿ ಸೇವೆಯಷ್ಟೇ ನಿಸ್ಪೃಹತೆಯಿಂದ ದುಡಿದರು. ಗೌಡ ಸಮಾಜದ ಏಳಿಗೆಗಾಗಿ ಪ್ರಾಮಾಣಿಕ ಸೇವೆ ಹಾಗೂ ತನುಮನ ಧನವನ್ನರ್ಪಿಸಿದವರಲ್ಲಿ ಇವರು ಕೂಡ ಒಬ್ಬರು. ಮೈಸೂರು ಹಾಗೂ ಮಡಿಕೇರಿ ಗೌಡ ಸಮಾಜದ ಕಟ್ಟಡಗಳ ನಿರ್ಮಾಣದ ಸಮಯದಲ್ಲಿ ಇವರ ಸೇವೆಯು ಸ್ತುತ್ಯಾರ್ಹವಾದದ್ದಾಗಿದೆ. ಕಟ್ಟಡಗಳ ನಿರ್ಮಾಣದ ಕಾರ್ಯದಲ್ಲಿ ಮೇಲ್ವಿಚಾರಕರಾಗಿ ದುಡಿದುದಲ್ಲದೆ ಉದಾರ ಕೊಡುಗೆಯನ್ನು ಸಹ ನೀಡಿರುತ್ತಾರೆ.

ಶ್ರೀಯುತರ ಕುಟುಂಬ ತುಂಬಿದ ಕುಟುಂಬವಾಗಿದ್ದು (4 ಮಂದಿ ಪುತ್ರರು ಹಾಗೂ 6 ಮಂದಿ ಪುತ್ರಿಯರು) ಇವರ ಪ್ರಥಮ ಪುತ್ರಿ ಶ್ರೀಮತಿ ಬಿ. ಪಿ. ಮುತ್ತಮ್ಮ ಇವರು ಗೌಡಜನಾಂಗದ ಪ್ರಥಮ ಮಹಿಳಾ ತಹಶೀಲ್ದಾರರಾಗಿ ಸೇವೆ ಸಲ್ಲಿಸಿ ಇತ್ತೀಚೆಗಷ್ಟೆ ನಿವೃತ್ತರಾಗಿರುತ್ತಾರೆ. ಒಬ್ಬ ಪುತ್ರ ಹಾಗೂ ಪುತ್ರಿ ಅರಣ್ಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನಿಬ್ಬರು ಪುತ್ರಿಯರು ಆರೋಗ್ಯ ಇಲಾಖೆಯಲ್ಲಿ ದುಡಿಯುತ್ತಿದ್ದಾರೆ. ಒಬ್ಬ ಪುತ್ರ ಸ್ವಂತ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಉಳಿದ ಇಬ್ಬರು ಪುತ್ರರು ವ್ಯವಸಾಯದಲ್ಲಿ ನಿರತರಾಗಿದ್ದಾರೆ.

ಶ್ರೀಯುತರಿಗೆ ಮಕ್ಕಳೆಂದರೆ ತುಂಬಾ ಪ್ರೀತಿ. ಮಕ್ಕಳು ಅವರನ್ನು ಪ್ರೀತಿಯಿಂದ 'ತಾತ' ಎಂಬುದಾಗಿಯೂ, ಕಛೇರಿಗಳಲ್ಲಿ ಅವರನ್ನು ವಿಶ್ವಾಸದಿಂದ 'ಅಂಕಲ್' ಎಂಬುದಾಗಿ ಕರೆಯುವುದು ವಾಡಿಕೆಯಾಗಿತ್ತು. ಸೇವಾವಧಿಯಲ್ಲಿ ಮತ್ತು ನಿವೃತ್ತಿಯ ನಂತರವೂ ಅವರ ಸಹವರ್ತಿಗಳು ಹಾಗೂ ಸಾರ್ವಜನಿಕರು ಅವರ ಬಗ್ಗೆ ತೋರುತ್ತಿದ್ದ ಪ್ರೀತಿ, ವಿಶ್ವಾಸ ಅವರ ಸ್ನೇಹಮಯ ಜೀವನಕ್ಕೊಂದು ಉತ್ತಮ ನಿದರ್ಶನವಾಗಿದೆ. ಅವರ ಬಗ್ಗೆ ಹೇಳುವುದಾದರೆ, ಅವರು ಜನ ಸಂಪಾದನೆ ಮಾಡಿದರೇ ವಿನಃ ಧನ ಸಂಪಾದನೆಯನ್ನು ಆಶಿಸಿದವರಲ್ಲ. ಒಬ್ಬ ಇಂಜಿನಿಯರನಾಗಿದ್ದು ಕೊಂಡು ತನ್ನ ಗಳಿಕೆಯಲ್ಲಿ ತನ್ನ ಊರಿನಲ್ಲಿ ವಾಸಕ್ಕೊಂದು ಮನೆ ಮಾಡಿದ್ದರೇ ವಿನಃ ಇನ್ಯಾವ ಆಸ್ತಿ ಮಾಡಿರಲಿಲ್ಲವೆಂಬ ಮೆಚ್ಚುಗೆಯ ಮಾತನ್ನು ಹೇಳಬೇಕಾಗುತ್ತದೆ. ಶ್ರೀಯುತರು ತನ್ನ 78ನೇ ವಯಸ್ಸಿನಲ್ಲಿ ವಿಧಿವಶರಾದರು. ದಿವಂಗತ ಪಳಂಗಪ್ಪನವರ ಶಿಸ್ತಿನ ಜೀವನ, ಸಮಯ ಪಾಲನೆ, ಪ್ರಾಮಾಣಿಕತೆ, ಕಾರ್ಯದಕ್ಷತೆ, ಸೇವಾಕಾಂಕ್ಷೆ ಈ ಆದರ್ಶಗಳು ಜನಾಂಗಕ್ಕೆ ಸಮಾಜಕ್ಕೆ ದಾರಿ ದೀಪವಾಗಿದೆ. ಅವರ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿಯನ್ನು ಕರುಣಿಸಲೆಂದು ಹಾರೈಸುತ್ತೇನೆ. ಅಲ್ಲದೆ ಅವರ ಕುಟುಂಬ ವರ್ಗಕ್ಕೆ ಭಗವಂತನು ಆಯುರಾರೋಗ್ಯವನ್ನು ಕರುಣಿಸಲೆಂದು ಸಹ ಹಾರೈಸುತ್ತೇನೆ.

ಸಾದರ ಪಡಿಸಿದವರು : ಮುಕ್ಕಾಟಿ ಎಂ. ಉಲ್ಲಾಸ, ಕುಶಾಲನಗರ

# ಮನೆಯೊಳಗಿನ ಮಾಲಿನ್ಯ : ಆರೋಗ್ಯ

ವಾಯು ಮಾಲಿನ್ಯ, ಜಲ ಮಾಲಿನ್ಯ, ಶಬ್ದ ಮಾಲಿನ್ಯ ಮುಂತಾದ ಪದಗಳು ಈಗ ಸವಕಲು. ವಾತಾವರಣಕ್ಕೆ ಸಂಬಂಧ ಪಟ್ಟಂತೆ ಈ ಮಾಲಿನ್ಯಗಳ ಬಗ್ಗೆ ವಿಶ್ವದಾದ್ಯಂತ ಸಾಕಷ್ಟು ಚರ್ಚೆಗಳಾಗುತ್ತಿದ್ದರೂ ಈ ಮಾಲಿನ್ಯಗಳ ತೀವ್ರತೆ ಮಾತ್ರ ವರ್ಷ ವರ್ಷ ಅಧಿಕಗೊಳ್ಳುತ್ತಿದೆ. ಇವುಗಳ ನಿಯಂತ್ರಣದ ಬಗ್ಗೆ ಕ್ರಮಗಳನ್ನು ಸೂಚಿಸಲಾಗಿದ್ದರೂ ಕಾರ್ಯರೂಪಕ್ಕೆ ಬಂದಿರುವುದು ಬಹಳ ಕಡಿಮೆ.

ಆದರೆ ಶ್ರೀಸಾಮಾನ್ಯರು ವಾತಾವರಣ ಮಾಲಿನ್ಯದ ಬಗ್ಗೆ ತಲೆಬಿಸಿ ಮಾಡಿಕೊಳ್ಳುವ ಮುನ್ನ ಮತ್ತೊಂದು ವಿಷಯದ ಕಡೆಗೆ ಹೆಚ್ಚಿನ ಗಮನ ಕೊಡಬೇಕಾಗಿದೆ. ಅದೆಂದರೆ ಮನೆಯೊಳಗಣ ಮಾಲಿನ್ಯ. ಮನೆ ತುಂಬ ಕಸ ಹರಡಿಕೊಂಡು ನಾವು ವಾತಾವರಣದ ವಿವಿಧ ಮಾಲಿನ್ಯದ ಬಗ್ಗೆ ಮಾತನಾಡುವುದರಲ್ಲಿ ಅರ್ಥವಿಲ್ಲ. ಆ ಕಾರಣ ಪ್ರತಿಯೊಬ್ಬ ಪ್ರಜೆಯೂ ತಾನು ವಾಸಿಸುವ ಮನೆಯೊಳಗಿನ ಮಾಲಿನ್ಯದ ಬಗ್ಗೆ ಹೆಚ್ಚು ಎಚ್ಚರ ವಹಿಸಬೇಕು. ಈ ನಿಟ್ಟಿನಲ್ಲಿ ಮನೆಯಲ್ಲಿನ ಎಲ್ಲ ಸದಸ್ಯರ ಸಹಕಾರ ಅಗತ್ಯವಾದರೂ ಮೂರು ಹೊತ್ತು ಮನೆಯಲ್ಲಿಯೇ ಇರುವ ಗೃಹಿಣಿ ತನ್ನ ಮನೆಯೊಳಗಣ ಮಾಲಿನ್ಯದ ಬಗ್ಗೆ ಎಚ್ಚರ ವಹಿಸುವುದು ಮುಖ್ಯ.

ಆಧುನಿಕತೆ ಹೆಸರಿನಲ್ಲಿ ಅನೇಕ ಮನೆಗಳಲ್ಲಿ ಎಲ್ಲ ಕಿಟಕಿ ಬಾಗಿಲುಗಳಿಗೂ ದಪ್ಪನೆಯ ಪರದೆ ಹಾಕಿ ಗಾಳಿ ಬೆಳಕು ಒಳಬರದಂತೆ ಮಾಡಿರುತ್ತಾರೆ. ಇದು ನಿಜಕ್ಕೂ ಖಂಡನೀಯ. ಅಂಥ ಮನೆ ಒಳಗೆ ಉಸಿರು ಕಟ್ಟುವ ಅನುಭವ ಉಂಟಾಗುತ್ತದೆ. ಜೊತೆಗೆ ಮನೆಯ ಒಳಗೆ ಸುಮಧುರ ವಾಸನೆ ಇರಲೆಂದು ಅಂಗಡಿಯಿಂದ ದುರ್ಗಂಧ ನಿವಾರಕಗಳನ್ನು ತಂದಿಡುತ್ತಾರೆ. ಮೊದಲೇ ಮನೆಯ ಒಳಗೆ ಗಾಳಿ ಇರುವುದಿಲ್ಲ. ಜೊತೆಗೆ ಇವುಗಳ ವಾಸನೆ ಬೇರೆ. ಇದು ಮನೆಯೊಳಗಿನ ಗಾಳಿಯನ್ನು ಕಲುಷಿತಗೊಳಿಸುತ್ತದೆ. ಏಕೆಂದರೆ ಈ ವಸ್ತುಗಳಲ್ಲಿ 'ಪ್ಯಾರಾಪೆರಿ ಡೈ ಕ್ಲೋರೋ ಬೆನ್‌ಜಿನ್' ಎಂಬ ರಾಸಾಯನಿಕ ಇರುತ್ತದೆ. ಇದು ಕ್ಯಾನ್ಸರ್ ಉಂಟುಮಾಡಬಲ್ಲದೆಂದು ತಜ್ಞರು ಹೇಳಿದ್ದಾರೆ. ಆ ಕಾರಣ ಗೃಹಿಣಿಯರು ಈ ದುರ್ಗಂಧ ನಿವಾರಕಗಳನ್ನು ಮನೆಯ ಯಾವುದೇ ಕೊಠಡಿಯಲ್ಲಿ ಅಥವಾ ಶೌಚಾಲಯಗಳಲ್ಲಿ ಬಳಸ ಬಾರದು. ಇದಕ್ಕೆ ಬದಲಾಗಿ ಕರ್ಟನ್‌ಗಳನ್ನು ತೆಗೆದು ಹಾಕಿ ಗಾಳಿ ಮತ್ತು ಬೆಳಕು ಧಾರಾಳವಾಗಿ ಮನೆಯೊಳಗೆ ಬರುವಂತೆ ಮಾಡಬೇಕು. ಹಾಗೆಯೇ ಜಿರಲೆಗಳನ್ನು ಓಡಿಸಲು ನ್ಯಾಪ್ತಲೀನ್ ಗುಳಿಗೆಗಳನ್ನು ಬಳಸುವುದು ಅಪಾಯಕಾರಿ ಇದರಲ್ಲೂ ಮೇಲೆ ಹೇಳಿದ ರಾಸಾಯನಿಕವಿದೆ.

ನಮ್ಮ ಮನೆಗಳಲ್ಲಿ ಶಬ್ದ ಮಾಲಿನ್ಯಕ್ಕೇನೂ ಕೊರತೆಯಿಲ್ಲ. ಇತ್ತೀಚೆಗೆ ನಮ್ಮ ಯುವಕ-ಯುವತಿಯರು ಟಿ.ವಿ., ಕ್ಯಾಸೆಟ್, ರೇಡಿಯೋ ಮುಂತಾದವುಗಳನ್ನು ಹೆಚ್ಚಿನ ವಾಲ್ಯೂಂ ನೀಡಿ ಕೇಳುವ ಪರಿಪಾಠ ಬೆಳೆಸಿಕೊಂಡಿದ್ದಾರೆ. ಇದರ ಪರಿಣಾಮವಾಗಿ ತಮ್ಮ ಮನೆಯಲ್ಲಿ ಅಲ್ಲದೆ ಅಕ್ಕಪಕ್ಕದವರಿಗೂ ಶಬ್ದ ಮಾಲಿನ್ಯ ಉಂಟಾಗುವುದರಲ್ಲಿ ಅನುಮಾನವಿಲ್ಲ. ಶಬ್ದ ಮಾಲಿನ್ಯದಿಂದ ಮಾನಸಿಕ ನೆಮ್ಮದಿ ಹಾಳು. ಗೃಹಿಣಿಯರೇ, ನಿಮ್ಮ ನಿಮ್ಮ ಮನೆಗಳಲ್ಲಿ ಈ ಸಾಧನಗಳನ್ನು ಸಾಕಷ್ಟು ಕಡಿಮೆ ವಾಲ್ಯೂಂನಲ್ಲಿ ಕೇಳುವ ಪರಿಪಾಠವನ್ನು ಮಕ್ಕಳಲ್ಲಿ ಬೆಳೆಸಿ.

ಶೌಚಾಲಯ ಶುಚಿತ್ವದ ಕಡೆಗೆ ನಾವು ಗಮನ ಕೊಡುವುದು ಬಹಳ ಕಡಿಮೆ. ಶೌಚಾಲಯಗಳು ನಮ್ಮ ಊಟದ ಮನೆಯಷ್ಟೇ ಶುಚಿಯಾಗಿರಬೇಕೆಂಬ ಗಾಂಧೀಜಿ ಅವರ ಮಾತನ್ನು ಇಲ್ಲಿ ಸ್ಮರಿಸಿ ಕೊಳ್ಳಬಹುದು. ನಮ್ಮ ನಮ್ಮ ಮನೆಯ ಶೌಚಾಲಯಗಳನ್ನು ಶುಚಿ ಮಾಡಿಕೊಳ್ಳುವುದರಲ್ಲಿ ಏನೂ ಅವಮಾನವಿಲ್ಲ. ಸೂಕ್ತ ಕ್ರಿಮಿನಾಶಕದಿಂದ ಪ್ರತಿ ದಿನ ಕಕ್ಕಸುಗಳನ್ನು ಶುಚಿ ಮಾಡಿರಿ. ಕ್ರಿಮಿನಾಶಕ ಹಾಕಿದ ತಕ್ಷಣ ಹೆಚ್ಚು ಹೊತ್ತು ಅಲ್ಲಿರಬೇಡಿ. ಕ್ರಿಮಿನಾಶಕದಲ್ಲಿರುವ ರಾಸಾಯನಿಕಗಳು ನಮಗೆ ಉಸಿರಾಟದ ತೊಂದರೆ ಉಂಟುಮಾಡುತ್ತವೆ.

ಸಾಯಂಕಾಲದ ವೇಳೆ ಸೊಳ್ಳೆಗಳನ್ನು ಓಡಿಸಲು ಇತ್ತೀಚೆಗೆ ಅನೇಕ ರೀತಿಯ ಕಾಯಿಲ್‌ಗಳನ್ನು ಬಳಸುತ್ತೇವೆ. ಇದರ ಬಳಕೆಯಿಂದ ಸೊಳ್ಳೆಗಳು ದೂರ ಸರಿದರೂ, ಅವುಗಳಿಂದ ಬರುವ ಹೊಗೆಯಲ್ಲಿರುವ ರಾಸಾಯನಿಕಗಳು ಮಾನವನಿಗೂ ಅಪಾಯ ಉಂಟು ಮಾಡುತ್ತವೆಯೆಂದು ಇತ್ತೀಚಿನ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಜಾಹೀರಾತುದಾರರು ಏನೇ ಸಮರ್ಥಿಸಿಕೊಂಡರೂ ಮನೆಗಳಲ್ಲಿ ಅವುಗಳನ್ನು ಬಳಸಿ ಮನೆಯೊಳಗಿನ ವಾತಾವರಣವನ್ನು ಕಲುಷಿತಗೊಳಿಸಬೇಡಿ.

ದೇವರಿಗಾಗಿ ಹಚ್ಚುವ ಊದುಬತ್ತಿಯಿಂದ ಹೊರಬರುವ ಹೊಗೆ ಸಹ ಮನೆಯೊಳಗಿನ ವಾತಾವರಣವನ್ನು ಮಲಿನ ಮಾಡುತ್ತದೆಂದು ತಜ್ಞರು ಹೇಳಿದ್ದಾರೆ. ಈ ಹೊಗೆಯಲ್ಲಿ ಕೆಲವು ರಾಸಾಯನಿಕಗಳಿದ್ದು ಅದು ಅಲರ್ಜಿ ಉಂಟುಮಾಡಬಹುದು. ಊದುಬತ್ತಿ ಬಳಸುವುದು, ಬಿಡುವುದು ನಿಮಗೆ ಬಿಟ್ಟಿದ್ದು.

ಅನೇಕ ಪುರುಷರು ಧೂಮಪಾನ ಮಾಡುವ ಅಭ್ಯಾಸ ಹೊಂದಿರುತ್ತಾರೆ. ಕೆಲವರು ಮನೆಯವರಿಗೆ ಗೊತ್ತಾಗದ ಹಾಗೆ ಹೊರಗಡೆ ತಮ್ಮ ಚಟ ತೀರಿಸಿಕೊಂಡರೆ ಮತ್ತೆ ಕೆಲವರು ತಮ್ಮ ಮನೆಯಲ್ಲಿಯೇ ಪತ್ನಿ, ಮಕ್ಕಳ ಮುಂದೆ ಧೂಮಪಾನ ಮಾಡುತ್ತಾರೆ. ಧೂಮಪಾನದಿಂದಾಗುವ ತೊಂದರೆಗಳ ಬಗ್ಗೆ ಈಗ ಸಾಮಾನ್ಯ ಜನರಿಗೆ ಸಾಕಷ್ಟು ಅರಿವಿದೆ. ಧೂಮಪಾನದಿಂದ ಮನೆಯೊಳಗಿನ ವಾತಾವರಣ ಮಲಿನಗೊಂಡು ಆ ಹೊಗೆಯನ್ನು ಅನಿವಾರ್ಯವಾಗಿ ಸೇವಿಸುವ ಮನೆಯ ಇತರ ಮಂದಿ ಸಹ ತೊಂದರೆಗೆ ಒಳಗಾಗುವುದು ಖಂಡಿತ. ಮಹಿಳೆಯರೇ, ನಿಮ್ಮ ಪತಿವರ್ಯರು ಈ ದುರಭ್ಯಾಸ ಹೊಂದಿದ್ದು, ಮನೆಯಲ್ಲೇ ಧೂಮಪಾನ ಮಾಡುವುದಾದರೆ ಅದರ ಬಗ್ಗೆ ನಮ್ರವಾಗಿ ಎಚ್ಚರಿಸಿ. ನಿಮ್ಮ ಮತ್ತು ನಿಮ್ಮ ಮಕ್ಕಳ ಆರೋಗ್ಯ ಕಾಪಾಡಿರಿ. ನೆನಪಿಡಿ, ಧೂಮಪಾನದ ಹೊಗೆಯಲ್ಲಿ ಸುಮಾರು 4000 ರಾಸಾಯನಿಕಗಳಿರುತ್ತವೆ!

ಅನೇಕ ಮನೆಗಳಲ್ಲಿ ಹಣ್ಣು- ತರಕಾರಿಗಳ ಮತ್ತು ಹೂವಿನ ತ್ಯಾಜ್ಯ ವಸ್ತುಗಳನ್ನು ಎಲ್ಲೆಂದರಲ್ಲಿ ಹಾಕಿರುತ್ತಾರೆ. ಇದರಿಂದ

ನೊಣ ಮತ್ತು ಸಣ್ಣ ಸೊಳ್ಳೆಗಳ ಕಾಟ ಅಧಿಕವಾಗಿ ನಾನಾ ರೋಗಗಳಿಗೆ ಆಹ್ವಾನ ನೀಡಿದಂತೆಯೇ ಸರಿ. ಇಂಥ ತ್ಯಾಜ್ಯ ವಸ್ತುಗಳನ್ನು ಪ್ಲಾಸ್ಟಿಕ್ ಬಕೆಟ್‌ನಲ್ಲಿ ಹಾಕಿ ಭದ್ರವಾಗಿ ಮುಚ್ಚಿರಿ. ಇಲ್ಲವೆ, ಮನೆಯ ಹಿತ್ತಲಲ್ಲಿ (ಇದ್ದರೆ?) ಗುಂಡಿ ತೋಡಿ ಹಾಕಿರಿ.

ಧೂಳು ಮಾನವನ ಅತಿ ದೊಡ್ಡ ಶತ್ರು. ಇದು ಮನೆಯ ಹೊರಗೆ ಇರುವಂತೆ ಮನೆಯ ಒಳಗೂ ಇದ್ದು ನಮ್ಮ ಆರೋಗ್ಯವನ್ನು ಹಾಳು ಮಾಡುತ್ತದೆ. ಮನೆಯಲ್ಲಿನ ಎಲ್ಲ ಪದಾರ್ಥಗಳ ಮೇಲೆ ಇದು ಕುಳಿತಿರುತ್ತದೆ. ಇದರಲ್ಲಿ ಲಕ್ಷಾಂತರ ಸೂಕ್ಷ್ಮಾಣುಗಳಿದ್ದು, ಇವನ್ನು 'ಮೈಟ್ಸ್' ಎಂದು ಕರೆಯುತ್ತಾರೆ. ಕಣ್ಣಿಗೆ ಗೋಚರಿಸುವುದಿಲ್ಲ. ಹಾಸಿಗೆ, ಬಟ್ಟೆ ಬರೆ, ಪುಸ್ತಕಗಳ ಮೇಲೆ ಇವು ಸಾಮಾನ್ಯ. ಗೋಡೆಗಳ ಮೇಲೆ ಜೇಡ ಬಲೆ ಕಟ್ಟಿ ಅದರ ಮೇಲೆ ಧೂಳು ಕುಳಿತಿರುತ್ತದೆ. ಇವನ್ನು ನಿಯಂತ್ರಿಸಲು ಹಾಸಿಗೆ, ಬಟ್ಟೆಗಳನ್ನು ಆಗಾಗ ಬಿಸಿಲಿಗೆ ಹಾಕಬೇಕು. ಗೋಡೆಯ ಮತ್ತು ಮನೆಯಲ್ಲಿನ ವಸ್ತುಗಳ ಮೇಲಿನ ಧೂಳನ್ನು ಆಗಾಗ ತೆಗೆಯಬೇಕು. ಧೂಳಿನಿಂದ ಅಲರ್ಜಿ ಉಂಟಾಗುತ್ತದೆ. ಇದನ್ನು ತೆಗೆಯುವಾಗ ಮೂಗಿಗೆ ತೆಳು ವಸ್ತ್ರವನ್ನು ಕಟ್ಟಿಕೊಳ್ಳಬೇಕು.

ಅನೇಕರು ಪ್ರೀತಿಗಾಗಿ ಮನೆಗಳಲ್ಲಿ ಪ್ರಾಣಿಗಳನ್ನು ಸಾಕುತ್ತಾರೆ. ಪ್ರಾಣಿಗಳನ್ನು ನಾವು ಪ್ರೀತಿಸಬೇಕು, ನಿಜ. ಆದರೆ ಅವುಗಳನ್ನು ಅತಿಯಾಗಿ ಮುದ್ದಾಡುವುದರಿಂದ ರೋಗಾಣುಗಳು ಹರಡುತ್ತವೆಂಬುದನ್ನು ಮರೆಯಬೇಡಿ. ಅವನ್ನು ಆದಷ್ಟು ದೂರ ಇಡಿ. ಕೆಲವರು ಸಸ್ಯಗಳನ್ನು ಮನೆಯ ಒಳಗೆ ವೃದ್ಧಪಡಿಸುತ್ತಾರೆ. ಇದರಿಂದಲೂ ಮನೆಯ ಒಳ ವಾತಾವರಣ ಕಲುಷಿತಗೊಂಡು ಅಲರ್ಜಿ ಉಂಟಾಗುತ್ತದೆ.

ಇನ್ನೂ ಅನೇಕ ವಿಧಗಳಲ್ಲಿ ಮನೆಯ ಒಳಾಂಗಣ ಕಲುಷಿತವಾಗುತ್ತದೆ. ಇದನ್ನು ನಿಯಂತ್ರಿಸಲು ಗೃಹಿಣಿಯೊಂದಿಗೆ ಇತರ ಸದಸ್ಯರೂ ಸಹಕರಿಸಬೇಕು.

**ಬರಹ : ಜಿ. ಅನಂತನಾರಾಯಣ ಸ್ವಾಮಿ**

---

## ಆದುನಿಕ ಪದಕೋಶ

**ಕ್ಷೌರಿಕ :** ರಾಷ್ಟ್ರದ ಅತ್ಯುನ್ನತ ಹುದ್ದೆಯಲ್ಲಿದ್ದ ಮಹಾನುಭಾವನು ಕೂಡ ತಲೆಬಾಗಿಸಬೇಕಾದ ವ್ಯಕ್ತಿ

**ಗುಟುಕಾ :** ಇಂದಿನ ಯುವಕರು ಬಾಯಲ್ಲಿ ಜಗಿಯುತ್ತಿದ್ದಂತೆ, ವೈದ್ಯರು, ಮಾರಾಟಗಾರರು ಜೇಬು ತುಂಬಿಸಿಕೊಳ್ಳಲು ಅವಕಾಶ ನೀಡುವ ಪದಾರ್ಥ.

**ದಂಪತಿ :** ದೊಡ್ಡ ದೇಹದ ಗುಡಾಣ ಹೊಟ್ಟೆಯಗಂಡ

**ಜಾತಿ :** ಸ್ವಾರ್ಥ ರಾಜಕಾರಣಿಗಳು ಸದುಪಯೋಗ ಪಡಿಸಿಕೊಳ್ಳುವ ಮತ ಬ್ಯಾಂಕ್.

**ಸಭೆ :** (ಸಂತಾಪ ಸೂಚಕ) ಬಾಯಲ್ಲಿ ಸತ್ತವನ ಗುಣಗಾನ ಮಾಡುತ್ತ ಮುಖದಲ್ಲಿ ವ್ಯಥೆ ಪ್ರದರ್ಶಿಸುತ್ತ ಹೃದಯದಲ್ಲಿ ಸಂತಸಪಡುವ ಒಂದು ಕಾರ್ಯಕ್ರಮ.

ಅಮೆಮನೆ ನವೀನ್, ಮಡಿಕೇರಿ.

## ಬೋರ್ಡಿಂಗ್ ಮದುವೆಗಳಿಂದ ಬೋರಾಲಾಗುತ್ತಿರುವ ನಮ್ಮ ಪದ್ಧತಿಗಳು

ಹೌದು ಈಗ ಎಂತಾ ಬಡವನಾದರು ಸಾಲ ಮೂಲ ಮಾಡಿಯಾದರು ಬೋರ್ಡಿಂಗ್‌ಲೆ ಮದುವೆ ಮಾಡ್ದೆ. ಮನೇಲಿ ಮದುವೆ ಮಾಡ್ರೆ ಎಲ್ಲಿ ಮರ್ಯಾದೆ ಹೋದೆತೇಳಿ ಈಗನವರ ಭಾವನೆ ಕಂಡದೆ. ಬಫೆಸಿಸ್ಟಮ್ ಓಪಾನ್ ಬಾರ್ ಇದ್ದ್ ಬುಟ್ರೆ ಸಾಕ್. ಎಲ್ಲಾವರ ಬಾಯಿಲೀ ಹೊಗುಳುಮಾತ್ ಶುರಾದೆ. ಕಳ್ಳ್‌ನ ಬಗ್ಗೆ ಊಟದ ಬಗ್ಗೆ ಎಷ್ಟೊ ಮಾತಾಡುವ ಜನ ನಮ್ಮ ಶಾಸ್ತ್ರ ಸಮಕಟ್ಟ್‌ಗಳ ಬಗ್ಗೆ ಯಾಕೆ ಮಾತಡ್ಲೆ. ಬೋರ್ಡಿಂಗ್‌ಲಿ ಮದುವೆ ಮಾಡ್ರೆ ಗಂಡ್‌ಸರೇ ಒಂದು ಕಡೆ, ಹೆಂಗ್‌ಸರ್ ಒಂದುಕಡೆ, ಹಿರಿಯವು ಒಂದು ಕಡೆ, ಗೊಡೆಗ ಹೈದಗಳೇ ಬ್ಯಾರೆ, ಹಿಂಗೆ ಅವರವರ ಪಾಡಿಗೆ ಅವೊವು. ಅಲ್ಲಿ ಯಾವ ಶಾಸ್ತ್ರನೂ ಸರಿಯಾಗಿ ನಡಿಯಲೆ. ಯಾರು ಮುಂದೆ ಬಂದ್ ಮಾಡ್ವು ಇಲ್ಲೆ. ಮದುವೆಗೆ ಹೋದವು ಹಣ ಕಟ್ಟಿ ಊಟ ಮಾಡಿ ಸೀದಾ ಬಂದವೆ. ಇದ್ ಹಿಂಗೆ ಮುಂದ್‌ವರ್‌ದರೆ ಏನು ಪ್ರಯೋಜನ. ಇನ್ನ್ ಮುಂದಕ್ಕೆ ಯಾವ ಶಾಸ್ತ್ರ ಹೆಂಗೆತಾ ಗೊತ್ತಾಕ್ಕೆ ಬಾರೀ ಕಷ್ಟ ಉಟ್ಟು. ಮುಂದಿನ ತಲೆಮಾರಿಗೆ ಇದರ್‌ಂದ ಬಾರೀ ಹಾನಿ ಉಂಟಾದೆ. ನಮ್ಮ ಗೌಡ ಜಾತಿಲಿ ಹುಟ್ಟಿದವಂಗೆ ಪ್ರತಿಯೊಬ್ಬಂಗೂ ನಮ್ಮ ಮದುವೆಗಳಲ್ಲಿ ನಡಿಯುವ ಶಾಸ್ತ್ರಗಳ ಬಗ್ಗೆ ಗೊತ್ತಿರಕ್ಕೂ. ಆದ್ರೆ ಈಗಂತೂ ಊರ್‌ಲಿ ಒಬ್ಬಂಗೆ ಗೊತಿರ್‌ದೇ ಕಷ್ಟ. ಗೊತ್ತಿರವವನ ಹುಡುಕ್ಕಿಕಂಡ್ ಮೈಲುಗಟ್ಟಲೇ ಹೊಕು. ಅವನ ದಮ್ಮ ಹಾಕಿ ಕರಿಯಕ್ಕು. ಮಕ್ಕಬೇಕಡ, ತುಂಬಾ ಓದ್ಸೋಕಡ, ಒಳ್ಳೆ ಕೆಲ್ಸಕೊಡ್ಸೊಕಡ, ಒಳ್ಳೆ ಕಡೆ ಮದುವೆ ಮಾಡಿಕೊಡೊಕಡ, ಆದ್ರೆ ಮದುವೆ ಶಾಸ್ತ್ರಗಳನ್ನ ನಡ್ಸಿಕೊಡಿಕೆ ಇನ್ನೊಬ್ಬನ ಕರಿಯಾಕಡ, ಇದ್ ಯಾವ್ ಹಣೆಬರಹ. ಎಷ್ಟ್ ನಾಚಿಕೆ ಕೂಡ. ನಾವು ಕೂಡ ಗೌಡ ಜಾತಿಲೀ ಹುಟ್ಟಿತ್ಲಾ? ಎಲ್ಲಾ ಶಾಸ್ತ್ರಗಳ್ನ ಕಲ್‌ತ್‌ಕಂಡ್‌ರೆ ಮರ್ಯಾದೆ ಹೋದೆನಾ? ಇಂಥಾ ಪ್ರಶ್ನೆಗ ಯಾಕೆ ಇನ್ನ್ ಜನರ್‌ಂದ ದೂರನೆ ಉಳ್ದುಟು. ಹಿರಿಯವು ಇದ್ದಂಗೆ ಇರ್ದುಲ್ಲೇ ಅವರ್‌ದ ನಾವುಕಲ್ತ್ ನಮ್ಮ ಪೀಳಿಗೆಗೆ ಕಲ್ಸ್‌ದು ನಮ್ಮೆಲ್ಲರ ಕರ್ತವ್ಯ. ಶೋಕಿಲಿ ಡ್ರೆಸ್ ಮಾಡಿಕಂಡ್ ವೀಡಿಯೋ ಮುಂದೆ ಕೋಲಾ ಕಟ್ಟಿಕ್ಕೆ ಮಾತ್ರ ಬೋರ್ಡಿಂಗ್ ಮದುವೆ ಉತ್ತಮ. ಮನೇಲೀ ನಡಿಯುವ ಮದುವೆಗಳಲ್ಲಿ ದಿಬ್ಬಣ ಹೋದು ಬಾದುತೇಳ್ರೆ ಎಲ್ಲಾವುಕ್ಕು ಒಂಥಾರದ ಕುಸಿಯೇ. ಚಪ್ಪರ ಮೂರ್ತಗಳಲ್ಲಿ ಹಿರಿಯವು ಕ್ರಮವಾಗಿ ಒಂದೊಂದು ಶಾಸ್ತ್ರಗಳ್ನ ಮಾಡ್ಕನ ನಮ್ಮಂಥ ಗೂಡೆಗ ಹೈದಂಗ ಅವರೊಟ್ಟಿಗೆ ಕೈಸೇರ್‌ಸ್‌ಕಂಡ್ ಯಾವ ಯಾವ ಶಾಸ್ತ್ರಗ ಯಾವ ಸಮಯಲಿ ತಾ ತಿಳ್ಕಂಡ್‌ರೆ. ಇನ್ನ್ ಮುಂದಕ್ಕೆ ಮುಂದ್‌ವರ್‌ಸಿಕಂಡ್ ಹೊಕೆ ಕಷ್ಟ ಏನು ಇಲ್ಲೆ ಇದರ ಮದ್ಯೆ ಹೆಣ್ಣುಮಕ್ಕಳ ಶೋಬಾನೆ ಕೇಳಿಕೆಅದೆಷ್ಟೋ ಕುಸಿ. ಮನೆಗಳ್ಲಿ ನಡಿಯುವ ಮದುವೆಂದ ನಮ್ಮ ಜನಾಂಗಕ್ಕೆ. ನಮ್ಮಂಥ ಗೂಡೆಗ ಹೈದಗಳಿಗೂ. ಎಷ್ಟೊ ಪ್ರಯೋಜನ ಉಟ್ಟು ನಮ್ಮ ಜನಾಂಗದ ಮದುವೆಗೆ ಹೆಚ್ಚಾಗಿ ಮನೆಗಳಲ್ಲೆ ನಡ್ಸಿದ್ದರೆ ಒಳ್ಳೆದ್ಧಿತ್ತೇನೊ.

ಅಣ್ಣಾ ಜೀರ ಭಾರತಿ ಸೋಮಣ್ಣ, ಮಕ್ಕಂದೂರು ಗ್ರಾಮ

---

## ಸಂಗಾತಿ ಭವಿಷ್ಯ : ಮೇ 1ರಿಂದ 15, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

**ಮೇಷರಾಶಿ** : ಹಣಕಾಸಿನ ವ್ಯವಹಾರದಲ್ಲಿ ಎಳ್ಳಿನಷ್ಟು ತೊಡಕಿಲ್ಲ. ಬರಬೇಕಾದ ಹಣ ಕೈ ಸೇರುತ್ತದೆ. ಕೈ ಬಿಟ್ಟ ಕೆಲಸಗಳು ಪುನಃ ಕೈಗೊಡುವುದು. ಸಿಟ್ಟನ್ನು ದೂರಮಾಡಿ. ದೇಹದಲ್ಲಿ ಉಷ್ಣಸಂಬಂಧ ವ್ಯಾಧಿ ಕಾಡಬಹುದು. ದೇವತಾರಾಧನೆ ಮಾಡಿಕೊಂಡು ಬನ್ನಿ.

**ವೃಷಭ ರಾಶಿ** : ಬಂಧುಗಳೊಡನೆ ಅನಾವಶ್ಯಕ ಕಲಹ ಮಾಡಬೇಡಿ. ವ್ಯವಹಾರ ಉದ್ಯೋಗದಲ್ಲಿ ಹೇರಳ ನಷ್ಟ ಅನುಭವಿಸುವಿರಿ. ಹೊಸ ವ್ಯವಹಾರಕ್ಕೆ ಕೈ ಹಾಕಬೇಡಿ. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ ವ್ಯವಹಾರ ಮಾಡಿ ಸ್ವಲ್ಪ ಮಟ್ಟಿಗೆ ನೆಮ್ಮದಿ. ಕುಲದೇವತಾ ಆರಾಧನೆ ಮಾಡಿಕೊಂಡು ಬನ್ನಿ.

**ಮಿಥುನ ರಾಶಿ** : ಜನ್ಮರಾಶಿಯಲ್ಲಿ ಶನಿಯ ಉಪಟಳ ಇದೆ. ಆದರೆ ಸ್ಥಾನಮಾನಗಳಿಗೆ ಕೊರತೆ ಇಲ್ಲ. ಉದ್ಯೋಗದಲ್ಲಿ ಸಾಧಾರಣ ಮಟ್ಟಿಗೆ ನೆಮ್ಮದಿ ಇದೆ. ಧನದ ವ್ಯವಹಾರದಲ್ಲಿ ಜಾಗ್ರತೆಯಿರಿ. ಬಲಕಣ್ಣಿಗೆ ವ್ಯಾಧಿ ಬರುವ ಸಂಭವ ಇರುವುದು. ರಾತ್ರಿ ಸಂಚಾರ ಬೇಡ.

**ಕರ್ಕಾಟಕ ರಾಶಿ** : ಸರಕಾರದಿಂದ ಸ್ವಲ್ಪಮಟ್ಟಿಗೆ ಲಾಭವಾದೀತು. ಭೂಸಂಬಂಧ ಮೊಕದ್ದಮೆಗಳಿಂದ ಲಾಭವಾಗಲಿದೆ. ಹೊಸ ಭೂಮಿ ಖರೀದಿಸಲು ಉತ್ತಮ ಕಾಲ. ಉತ್ತರ ದಿಕ್ಕಿನಿಂದ ಹೇರಳ ಲಾಭವಾಗಲಿದೆ. ಅಷ್ಟಲಕ್ಷ್ಮಿಯ ಜಪ ಮಾಡಿ.

**ಸಿಂಹರಾಶಿ** : ಪುರುಷರಿಗೆ ಬಲಭಾಗದಲ್ಲೂ, ಸ್ತ್ರೀಯರಿಗೆ ಎಡಭಾಗದಲ್ಲಿ ತೊಂದರೆ ಬರಬಹುದು. ದೇಹದಲ್ಲಿ ವ್ಯಾಧಿಯಿಂದ ಮನಸ್ಸಿಗೆ ನೆಮ್ಮದಿ ಇರಲಾರದು. ಸ್ವಭೂಮಿಗೆ ಶತ್ರುಗಳಿಂದ ತಕರಾರು ಬರುವ ಸಂಭವವಿದೆ. ಜಾಗ್ರತೆಯಿಂದ ವ್ಯವಹರಿಸಿ ಮೃತ್ಯುಂಜಯ ಜಪ ಮಾಡುವುದರಿಂದ ಒಳಿತಾಗಲಿದೆ.

**ಕನ್ಯಾರಾಶಿ** : ಸರಪಳಿಯಂತೆ ಒಂದಲ್ಲ ಒಂದು ಕಷ್ಟಗಳು ಬರಲಿದೆ. ಅಪಘಾತ ಭಯವಿದೆ. ನವಗ್ರಹಾಧಿಪತಿ ಗಣಪತಿಯನ್ನು ಆರಾಧನೆ ಮಾಡಿ. ಗೃಹವಲಯದಲ್ಲಿ ನವಗ್ರಹ ಹೋಮ ನಡೆಸುವುದರಿಂದ ಸಂಸಾರದಲ್ಲಿ ನೆಮ್ಮದಿ ಸಿಗಬಹುದು.

**ತುಲಾರಾಶಿ** : ಕುಟುಂಬ ವಲಯದಲ್ಲಿ ನೆಮ್ಮದಿ ಇರಲಾರದು. ಯಾವುದೇ ರೀತಿಯ ಆಯುಧಗಳಿಂದ ಕಲಹ ಬೇಡ. ಜನ್ಮವಿತ್ತ ಮಕ್ಕಳಿಂದ ಕಲಹ ಬರಲಿರುವ ಸಂಭವವಿದೆ. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ, ಧೈರ್ಯದಿಂದ ಮುನ್ನಡೆಯಿರಿ.

**ವೃಶ್ಚಿಕರಾಶಿ** : ಮನಸ್ಸಿನ ಚಿಂತೆ ಸ್ವಲ್ಪ ಮಟ್ಟಿಗೆ ದೂರವಾಗಲಿದೆ. ಕಲಹ ಬೇಡ. ಬಲಭಾಗಕ್ಕೆ ಕಬ್ಬಿಣ ವಸ್ತುಗಳಿಂದ ಹಾನಿಯಾಗುವ ಸಂಭವವಿದೆ. ಎಚ್ಚರಿಕೆ ಅಗತ್ಯ. ಶನಿಕ್ಷೇತ್ರದಲ್ಲಿ ಪೂಜೆ ಪುರಸ್ಕಾರ ಮಾಡಿಕೊಂಡು ಬರುವುದರಿಂದ ನೆಮ್ಮದಿ ಸಿಗಲಿದೆ.

**ಧನಸ್ಸು ರಾಶಿ** : ಹಣಕಾಸಿನ ವ್ಯವಹಾರ ಉತ್ತಮವಿದೆ. ಪತ್ನಿ ಪುತ್ರರೊಂದಿಗೆ ಅನಾವಶ್ಯಕವಾಗಿ ಕಲಹ ಮಾಡಿಕೊಂಡಿರಬೇಡಿ. ಸಂಶಯ ಎಂಬ ಪ್ರೇತ ನಿಮ್ಮನ್ನು ಕಾಡಲಿದೆ. ಅನಾವಶ್ಯಕ ತಿರುಗಾಟದಿಂದ ಮನಸ್ಸಿಗೆ ನೆಮ್ಮದಿ ಇರಲಾರದು.

**ಮಕರ ರಾಶಿ** : ಕುಟುಂಬದಲ್ಲಿ ಅಭಿವೃದ್ಧಿ ಕಂಡು ಬರಲಿದೆ. ಹಣಕಾಸಿನ ವ್ಯವಹಾರದಲ್ಲಿ ತೊಂದರೆಯಿಲ್ಲ. ಹೊಸ ಸ್ನೇಹಿತರ ಪರಿಚಯದಿಂದ ಮನಸ್ಸಿಗೆ ನೆಮ್ಮದಿಯಾಗುವುದು. ಸ್ತ್ರೀ ಸಂಬಂಧವಾಗಿ ಮನೆಯಲ್ಲಿ ಕಿರಿಕಿರಿ ತಪ್ಪಿದ್ದಲ್ಲ.

**ಕುಂಭರಾಶಿ** : ಭೂಮಿ ವ್ಯವಹಾರದಲ್ಲಿ ಲಾಭವಾಗಲಿದೆ. ಧನ ಪ್ರಾಪ್ತವಾಗಲಿದೆ. ಶತ್ರುಗಳು ದೂರವಾಗಲಿದ್ದಾರೆ. ಮನಸ್ಸಿಗೆ ನೆಮ್ಮದಿ ಸಿಗುವುದು. ಈಶ್ವರನ ಆರಾಧನೆಯಿಂದ ನೆಮ್ಮದಿ ಸಿಗುವುದು. ಗೃಹವಲಯದಲ್ಲಿ ಲಗ್ನಕಾರ್ಯಗಳು ನೆರವೇರುವುದು.

**ಮೀನರಾಶಿ** : ಅನೇಕ ರೀತಿಯಲ್ಲಿ ಧನಹಾನಿಯಾಗುವುದು. ಚಂಚಲ ಬುದ್ಧಿಯಿಂದಾಗಿ ತೊಡಗಿದ ವ್ಯವಹಾರ ಅರ್ಧದಲ್ಲಿಯೆ ನಿಲ್ಲುವ ಸೂಚನೆ ಕಂಡುಬರಲಿದೆ. ಸಂಶಯದಿಂದ ಗೃಹವಲಯದಲ್ಲಿ ನೆಮ್ಮದಿ ಇರಲಾರದು. ಕುಲದೇವತಾರಾಧನೆ ಮಾಡಿದರೆ ಸುಖ ಸಿಗುವುದು.

---

### ಚುಟುಕು

ಗೂಡೆ ನೋಡಿಕೆ ಕರ್‌ಕಂಡ್ ಹೋದ ಅಪ್ಪ
ಅವಳ ಗೊಗ್ಗರೆ ಹಲ್ಲ್ ಪಾರೆಕಲ್ಲ್‌ನಂಗೆ ದಪ್ಪ
ಸತ್ಯ ಹೇಳೂಕುತಾದರೆ ಅದೊಂದು ಬೆರ್ಚಪ್ಪ
ನೋಡಿಕೆ ಹೋದ ನಾನೇ ಬೆಪ್ಪ

ಗುತ್ತಿಮುಂಡನ ಗಿರೀಶ್‌ಕುಮಾರ್

### ಪ್ರೀತಿ ಗೆಳೆತನ

ನೋಡಿ ನಡೆ ಮುಳ್ಳು ತುಳಿಯ ಬೇಡ
ತಿಳಿದು ಪ್ರೀತಿಸು ಮರಳು ಆಗಬೇಡ
ಪ್ರೀತಿಸಿದ ಮೇಲೆ ಕೈ ಬಿಡಬೇಡ
ಪ್ರೀತಿ ಸ್ನೇಹದ ಬಂಧವಿದು
ಗೆಳೆತನಕ್ಕೊಂದು ಶುಭ ಸಾಕ್ಷಿಯಿದು

ಸಬ್ಬಂಡ್ರ ಆರ್. ಶರತ್ ಕುಮಾರ್

---




✦ ಕೌಂಡಿನ್ಯ : ಧಾರವಾಹಿ -29

ಬೆಳಗಿನ ಎಂಟೂವರೆ !

ರೇವತಿ ಆಕಳಿಸುತ್ತಾ ಎದ್ದು ಕುಳಿತಳು. ಚೆನ್ನಾಗಿ ನಿದ್ರೆ ಮಾಡಿದ್ದರಿಂದ ಮುಖದಲ್ಲಿ ಕಳೆ ಬಂದಿತ್ತು !

ಮಂಚದಿಂದ ಎದ್ದು ಬಾತ್‌ರೂಮ್‌ಗೆ ಹೋಗಬೇಕು ಎಂದುಕೊಂಡಿರುವಾಗಲೇ ಏನೋ ಗಲಾಟೆ ಕೇಳಿಸಿತು.

ಯಾರೋ ದಡದಡನೆ ಓಡಾಡುತ್ತಿದ್ದಾರೆ.

ಬಂಗಲೆಯಲ್ಲಿ ಗಲಾಟೆ !

ಪ್ರಸನ್ನನ ಧ್ವನಿ ಕೇಳಿ ಬರುತ್ತಿದೆ.

ರೇವತಿಗೆ ಕುತೂಹಲ ಜಾಸ್ತಿ ಯಾಯಿತು. ಅವಳು ನೈಟಿಯನ್ನು ಸರಿ ಪಡಿಸಿಕೊಂಡು ರೂಮಿನಿಂದ ಹೊರ ಬಂದಳು.

ಎಲ್ಲರೂ ರೂಮಿನ ಹತ್ತಿರ ಇದ್ದಾರೆ !

ಪ್ರಸನ್ನ...... ಕೆಲಸದ ಆಳುಗಳು !

ಅದು ಲಿಂಗಯ್ಯನ ಕೊಠಡಿ !

ರೇವತಿ ಅಲ್ಲಗೆ ಬಂದಳು. ಕೊಠಡಿಯ ಬಾಗಿಲು ತೆರೆದಿತ್ತು. ಆದರೆ ಅಲ್ಲಿ ಈಗ ಯಾರು ಇರಲ್ಲಿಲ್ಲ !

ಪ್ರಸನ್ನನ ಕಡೆ ತಿರುಗಿದಳು.

ಅವನೇಕೋ ವಿಪರೀತ ಗಾಬರಿ ಯಾಗಿದ್ದಾನೆ ನಿಂತಲ್ಲೇ ಚಡಪಡಿಸುತ್ತಿದ್ದಾನೆ ಭಯಗೊಂಡಿದ್ದಾನೆ.

ಹೊರಗೆ ಹೋಗಿದ್ದ ಮತ್ತಷ್ಟು ಆಳುಗಳ ಆತಂಕದಿಂದ ಬಂದು "ಎಲ್ಲಾ ಕಡೆ ಹುಡುಕಿದೆವು ಇಲ್ಲ".

ಪ್ರಸನ್ನ ಪೋನಿನ ಹತ್ತಿರ ಬಂದು "ಇನ್ನು ಉದಾಸೀನ ಮಾಡಬಾರದು. ಪೊಲೀಸರಿಗೆ ತಿಳಿಸುತ್ತೇನೆ ಎಂದು ಡಯಲ್ ಮಾಡಿದನು.

ರೇವತಿ ಅವನ ಬೆನ್ನಿನ ಹತ್ತಿರ ಬಂದು "ಪ್ರಸನ್ನ..... ಯಾಕೆ...... ಏನಾಯಿತು?"

ಪ್ರಸನ್ನ ಉತ್ತರಿಸಲಿಲ್ಲ. ಕೆಲಸದ ಆಳು "ರಾತ್ರಿಯಿಂದ ಲಿಂಗಯ್ಯನವರು ಬಂಗಲೆಯಲ್ಲಿ ಇಲ್ಲ"

ರೇವತಿ ಬೆಚ್ಚಿ ಬಿದ್ದಳು.

ಇದೆಂತಹ ವಿಚಿತ್ರ ! ಹಿಂದಿನ ರಾತ್ರಿ ತಾನೇ ಪ್ರಸನ್ನನನ್ನು ಕೊಲೆ ಮಾಡಲು ಪ್ರಯತ್ನಿಸಿದ್ದ ವ್ಯಕ್ತಿ ದಿಢೀರ್ ಅಂತ ಅದು ಎಲ್ಲಿಗೆ ಹೊರಟು ಹೋದ? ರೇವತಿಗೆ ಪಕ್ಕನೆ ನೆನಪಾಯಿತು !

ಪ್ರಸನ್ನ ಆಡಿದ್ದ ಮಾತುಗಳು !

ಪ್ರಸನ್ನ ಹೇಳಿದ್ದ -ನನ್ನನ್ನು ಸಾಯಿಸಲು ಪ್ರಯತ್ನಿಸುತ್ತಿರುವ ಅಣ್ಣ ಲಿಂಗಯ್ಯನಿಗೆ ಬುದ್ಧಿ ಕಲಿಸುತ್ತೇನೆ.

ರೇವತಿಗೆ ಭಯ...... ಅನುಮಾನ?!

ಪ್ರಸನ್ನನ ಕೈವಾಡ ಇರಬಹುದೆ !

ಅವಳೇನು ಪ್ರಸನ್ನನನ್ನು ಪೂರ್ತಿಯಾಗಿ ನಂಬಿರಲಿಲ್ಲ. ಈಗ ಸಂದೇಹ ಹೊಗೆಯಾಡುತ್ತಿದೆ !

ರೇವತಿಗೆ ಉತ್ತರ ದೊರೆತಿರಲಿಲ್ಲ !

ಈ ಕೊಲೆಗಳು ಯಾಕೆ ನಡೆಯುತ್ತಿದೆ !

ಮೀನ....... ಅರುಂಧತಿ ಮತ್ತು ಅವಳ ಗಂಡ ಕೊಲೆ ಎಂಬ ನಿರೂಪಿಸಲಾಗದ ರೀತಿಯಲ್ಲಿ ಸತ್ತಿದ್ದಾರೆ.

ಅದು ಭಯಾನಕ ಸಾವು !

ನಿಗೂಢ ಘಟನೆಗಳು ಜರುಗುತ್ತಿದೆ !

ಆದರೆ ಅದಕ್ಕೆ ಕಾರಣವಾದರು ಏನು?

ಈಗ ಲಿಂಗಯ್ಯ ಕಣ್ಮರೆಯಾಗಿದ್ದಾನೆ. ಅರೆಹುಚ್ಚನಂತೆ ನಟಿಸುತ್ತಿದ್ದ ವ್ಯಕ್ತಿ ಈ ನಟನೆಯ ಅಗತ್ಯ ಏನು?

ಪ್ರಶ್ನೆಗಳು ಪ್ರಶ್ನೆಯಾಗಿಯೇ ಉಳಿಯುತ್ತಿದೆ!?

ರೇವತಿಯ ದೃಷ್ಟಿಗೆ ಮತ್ತೊಂದು ರೂಮಿನಲ್ಲಿ ಇದ್ದ ದೊಡ್ಡ ಅಣ್ಣ ವೀರಭದ್ರ ಕಂಡನು.

ಪಿಳಿ ಪಿಳಿ ಕಣ್ಣು ಬಿಡುತ್ತಿದ್ದಾನೆ !

ಅರ್ಧ ಗಂಟೆಯ ನಂತರ ಪೋಲಿಸ್ ಜೀಪ್ ಬಂಗಲೆಯ ಮುಂದೆ ನಿಂತಿತು. ತನಿಖೆ ಪ್ರಾರಂಭವಾಯಿತು.

ರೇವತಿ ಗಮನಿಸುತ್ತಿದ್ದಾಳೆ.

ಪೋಲಿಸರು ಲಿಂಗಯ್ಯ ಉಪಯೋಗಿಸುತ್ತಿದ್ದ ಕೊಠಡಿಯನ್ನು ಪರಿಶೀಲಿಸಿ ನೋಡಿದರು.

ಅಲ್ಲಿ ಅಡ್ಡ ಕಂಬಗಳಿಲ್ಲದ ದೊಡ್ಡ ಕಿಟಕಿ ಇತ್ತು ! ಲಿಂಗಯ್ಯ ಇಲ್ಲಿಂದಲೇ ಹೋಗಿರಬೇಕು ಎಂದು ಅನಿಸಿದರೂ ಸಹ ಮತ್ತೊಂದು ಸಂದೇಹ ಬಂದಿತು !

ಮುಂಬಾಗಿಲಿನ ಮೂಲಕ ಯಾಕೆ ಹೋಗಿರಬಾರದು?

ಪೋಲಿಸ್ ಅಧಿಕಾರಿ ಹತ್ತು ಹಲವಾರು ಪ್ರಶ್ನೆಗಳನ್ನು ಕೇಳಿದರು. ಪ್ರಸನ್ನ ಹಿಂದಿನ ರಾತ್ರಿ ತನ್ನ ಮೇಲೆ ಹತ್ಯೆಯ ಪ್ರಯತ್ನ ನಡೆದಿದ್ದನ್ನು ಹೇಳಲಿಲ್ಲ !

ಲಿಂಗಯ್ಯನನ್ನು ಅಪಹರಿಸಿದ್ದಾರೋ ಅಥವಾ ಅವನೇ ಎಲ್ಲಿಗಾದರೂ ಹೊರಟುಹೋಗಿದ್ದಾನೊ !

ಈ ಸಂದೇಹ ಉಳಿದುಕೊಂಡಿತು.

ಕೇಸನ್ನ ಬುಕ್ ಮಾಡಿಕೊಂಡರು.

ಪೋಲಿಸರು ಹೋದ ಮೇಲೆ ರೇವತಿ ಪ್ರಸನ್ನನ ಹತ್ತಿರ ಬಂದು ಏನನ್ನೋ ಕೇಳಲು ಬಾಯಿ ತೆರೆದಳು.

ಪ್ರಸನ್ನ ಕೈ ಅಡ್ಡ ಹಿಡಿದನು. ನಂತರ ಗಡುಸಾಗಿ "ಪ್ಲೀಸ್.... ನನ್ನ ತಲೆ ಈಗಾಗಲೇ ಕಟ್ಟು ಗೊಬ್ಬರ ಆಗಿದೆ. ನೀವು ನಿಮ್ಮ ಸಂದೇಹಗಳನ್ನೆಲ್ಲಾ ಕೇಳಿ ನನ್ನ ತಲೆ ತಿನ್ನಬೇಡಿ. ನಿಮ್ಮ ಯಾವ ಪ್ರಶ್ನೆಗೂ ಉತ್ತರಿಸೋಲ್ಲ"

20ನೇ ಪುಟಕ್ಕೆ

ಇಲ್ಲಿಯವರೆಗೆ........

ರೇವತಿ ಪ್ರಸನ್ನನ ಬಂಗಲೆಯಲ್ಲಿ ಉಳಿದುಕೊಂಡಿರುವಾಗ ಆರಾತ್ರಿ ಪ್ರಸನ್ನನ ಮೇಲೆ ಕೊಲೆಯ ಪ್ರಯತ್ನ ನಡೆಯುತ್ತದೆ. ಅರೆಹುಚ್ಚ ಲಿಂಗಯ್ಯನ ಮೇಲೆ ಅನುಮಾನ ಬರುತ್ತದೆ. ಅದೇ ರಾತ್ರಿ ಮತ್ತೊಬ್ಬ ಮುಸುಕುಧಾರಿ ಅಡ್ಡದಾರಿಯಲ್ಲಿ ಲಿಂಗಯ್ಯನ ಕೊಠಡಿಗೆ ಬರುತ್ತಾನೆ.

ಮುಂದೆ ಓದಿ..........

ಅರೆಭಾಷಿಕನೆ ತನ್ನಲಿರುವ ಕೀಳರಿಮೆಯನ್ನು ಬಿಟ್ಟು ಎದ್ದೇಳು

# ಶವಸಂಸ್ಕಾರ- ಉತ್ತರಕ್ರಿಯೆ

ಬದುಕಿರುವ ಮನುಷ್ಯನ ದೇಹದಲ್ಲಿ ಜೀವವಿಲ್ಲದಂತಾದಾಗ ಅದು 'ಶವ' ಎನಿಸಿಕೊಳ್ಳುತ್ತದೆ. ಬದುಕಿರುವಾಗ ಚಟುವಟಿಕೆಗಳ ಬೀಡಾಗಿ, ಮಾನವನಿಗೆ ಅಸ್ತಿತ್ವವನ್ನು ನೀಡಿದ ದೇಹವನ್ನು ಅದು 'ಶವ'ವಾದ ಮೇಲೂ ಗೌರವದಿಂದ ಕಾಣಬೇಕು, ಅದಕ್ಕೆ ತಕ್ಕ ರೀತಿಯಲ್ಲಿ ಅಂತ್ಯಸಂಸ್ಕಾರ ಮಾಡಬೇಕು ಎಂಬ ಭಾವನೆ ಬಹುಕಾಲದಿಂದ ಬಂದಿದೆ.

ಸತ್ತವನ ದೇಹಕ್ಕೆ ನೀಡುವ ಗೌರವದ ಅಂತ್ಯವೇ ಶವಸಂಸ್ಕಾರ, ಅದಾದ ಬಳಿಕ ಸತ್ತವನ ಶ್ರೇಯಸ್ಸಿಗಾಗಿ ಮಾಡುವ ಧಾರ್ಮಿಕ ಕಾರ್ಯ ಕ್ರಮಗಳು ಉತ್ತರಕ್ರಿಯೆ. ಸತ್ತಮೇಲೂ ದೇಹಕ್ಕೆ ಗೌರವ ತೋರುವುದು ನಾಗರಿಕತೆಯ ಲಕ್ಷಣ, ಸತ್ತವರಿಗೆ ಸರಿಯಾದ ಸಂಸ್ಕಾರ ಆಗದಿದ್ದರೆ ಅವರ ಆತ್ಮಕ್ಕೆ ಸದ್ಗತಿ ದೊರೆಯುವುದಿಲ್ಲವೆಂದು ಹಲವು ಧರ್ಮಗಳವರ ನಂಬಿಕೆ.

ಶವಸಂಸ್ಕಾರ ವಿವಿಧ ದೇಶಗಳಲ್ಲಿ, ವಿವಿಧ ಧರ್ಮಗಳಲ್ಲಿ ವಿಧವಿಧವಾಗಿ ಬಳಕೆಯಲ್ಲಿದೆ. ಆದರೆ ಇದರಲ್ಲಿ ಮುಖ್ಯವಾದದ್ದು ಎರಡು ವಿಧ: ಒಂದು ಶವವನ್ನು ಸುಡುವುದು. ಇನ್ನೊಂದು ಶವವನ್ನು ಹೂಳುವುದು.

ನಾಗರಿಕತೆಯ ಮೊದಲ ಹಂತಗಳಲ್ಲೊಂದಾದ ಶವಸಂಸ್ಕಾರ ಗವಿವಾಸದ ಕಾಲದಲ್ಲಿ, ಆರಂಭವಾಯಿತೆನ್ನಬಹುದು. ಗವಿವಾಸಿಗಳು ಸತ್ತವರನ್ನು ಎಲ್ಲಿದ್ದರಲ್ಲೇ ಬಿಟ್ಟು ಬಿಡದೆ ಅಥವಾ ಪ್ರಕೃತಿಯ ಮಡಿಲಿಗೆಸೆಯದೆ, ಗೌರವದಿಂದ ಹೂಳುತ್ತಿದ್ದರೆನ್ನುವುದು ಪುರಾತತ್ವಶಾಸ್ತ್ರ ತೋರಿಸಿಕೊಟ್ಟಿದೆ.

ಪ್ರಾಚೀನ ಈಜಿಪ್ಟಿನಲ್ಲಿ ರಾಜರು ಬದುಕಿರುವಾಗಲೇ ತಮಗಾಗಿ ಸಮಾಧಿಗಳನ್ನು ಕಟ್ಟಿಸುತ್ತಿದ್ದರು. ಇವು ಪಿರಮಿಡ್ಡುಗಳೆಂದು ಜಗದ್ವಿಖ್ಯಾತವಾಗಿವೆ. ರಾಜರಾಗಲಿ ಅಥವಾ ಖ್ಯಾತಿವಂತನಾಗಲಿ ಸತ್ತರೆ, ದೇಹವನ್ನು ತೊಳೆದು ಅದರೊಳಗೆ ಸಂಬಾರ ಪದಾರ್ಥಗಳನ್ನು ತುಂಬಿಸುತ್ತಿದ್ದರು, ದೇಹವನ್ನು ಎಪ್ಪತ್ತುದಿನ ಉಪ್ಪು ನೀರಿನಲ್ಲಿ ನೆನೆಸಿಟ್ಟು ಮತ್ತೆ ತೊಳೆದು ಅದಕ್ಕೆ ಉಡುಪು ತೊಡಿಸುತ್ತಿದ್ದರು. ದೇಹ ಕೆಡದಂತೆ ಸಂಸ್ಕರಿಸಿದ ಮೇಲೆ ಅದನ್ನು ಚಿನ್ನದ ಕೆತ್ತನೆಯುಳ್ಳ ಮರದ ಪೆಟ್ಟಿಗೆಯಲ್ಲಿಟ್ಟು ಪಿರಮಿಡ್ಡಿನಲ್ಲಿ ಸಮಾಧಿ ಮಾಡುತ್ತಿದ್ದರು, ಸತ್ತವನ ಆತ್ಮ ಮತ್ತೆ ಹಿಂದಕ್ಕೆ ಆ ದೇಹದಲ್ಲಿ ಬಂದು ಸೇರಿಕೊಳ್ಳುತ್ತದೆ ಎಂಬ ನಂಬಿಕೆಯೇ ಆ ಆಚರಣೆಗೆ ಕಾರಣ.

ಪುರಾತತ್ವಶೋಧಕರು ಕೆಲವು ಗುಡ್ಡಗಳನ್ನಗೆದಾಗ ಅವುಗಳ ಕೆಳಗೆ ಸತ್ತವರಿಗಾಗಿ ನಿರ್ಮಿಸಿದ ನೆಲಮಾಳಿಗೆ ಮನೆಗಳಿದ್ದದ್ದು ಉತ್ತರ ಹಾಗೂ ಪೂರ್ವ ಯುರೋಪಿನಲ್ಲಿ ಕಂಡುಬಂದಿದೆ.

ಸತ್ತವನ ಆತ್ಮ ದೇಹವನ್ನು ಬಿಟ್ಟಮೇಲೂ ಮೊದಲಿನಂತೆಯೇ ಬಾಳುತ್ತದೆ ಎಂಬ ನಂಬಿಕೆಯೇ ಹೀಗೆ ಮನೆಗಳನ್ನು ಕಟ್ಟಲು ಕಾರಣ. ಇದೇ ನಂಬಿಕೆಯಿಂದಲೇ ಕಡಲುಗಳ್ಳರು ತಮ್ಮ ನಾವೆಯ ಅಧಿಪತಿ ಸತ್ತರೆ ಅವನ ಜೊತೆಗೆ ಅವನ ಹಡಗನ್ನು ಹೂಳುತ್ತಿದ್ದರು, ಕಪ್ಪು ಸಮುದ್ರದ ಪ್ರದೇಶದಲ್ಲಿ ಸ್ಕಿಂಥಿಯನ್ ಜನ ರಾಜ ಸತ್ತರೆ ಅವನೊಂದಿಗೆ ಉಡುಪು ಒಡವೆಗಳನ್ನಲ್ಲದೆ ಅವನ ಕುದುರೆಗಳನ್ನೂ ನೌಕರರನ್ನೂ ಸಮಾಧಿ ಮಾಡುತ್ತಿದ್ದರು.

ಪ್ರಾಚೀನ ಗ್ರೀಕರ ಅನೇಕ ಪಂಗಡಗಳಲ್ಲಿ ಸತ್ತವರನ್ನು ಸುಡುವ ಪದ್ಧತಿಯಿತ್ತು. ಬೆಂಕಿಯಿಂದ ಆತ್ಮವಿಮೋಚನೆ ಎಂಬ ನಂಬಿಕೆ ಇದಕ್ಕೆ ಕಾರಣವಿರಬೇಕು.

ಬೌದ್ಧ ಧರ್ಮಾವಲಂಬಿಗಳಾದ ಜಪಾನಿ ರೈತರಲ್ಲಿ ಯಾರಾದರೂ ಕಾಲವಾದರೆ ಅವರ ದೇಹವನ್ನು ತೊಳೆದು, ಬಿಳಿ ಬಟ್ಟೆಯನ್ನು ಉಡಿಸಿ ಮರದ ಪೆಟ್ಟಿಗೆಯಲ್ಲಿಡುತ್ತಾರೆ. ಅದರ ಜೊತೆಗೆ ಸತ್ತವರಿಗೆ ಪ್ರಿಯವಾದ ಯಾವುದಾದರೂ ವಸ್ತುವನ್ನು ಇಡುವುದೂ ಉಂಟು, ಧರ್ಮಗುರುವನ್ನು ಆಹ್ವಾನಿಸಿ ಸತ್ತವರ ಗೌರವಾರ್ಥ ಭೋಜನ ಸಮಾರಂಭ ಏರ್ಪಡಿಸುತ್ತಾರೆ. ಧರ್ಮ ಗುರು ಈ ಸಮಾರಂಭದಲ್ಲೂ ಅನಂತರ ಸಮಾಧಿಸ್ಥಳದಲ್ಲೂ ಪ್ರಾರ್ಥನೆ ಸಲ್ಲಿಸುತ್ತಾನೆ.

ಚೀನದಲ್ಲಿ ಸತ್ತವರ ದೇಹವನ್ನು ತೊಳೆದು ಕಪ್ಪು ಅಥವಾ ಕೆಂಪು ಬಟ್ಟೆಯಲ್ಲಿ, ಸುತ್ತುತ್ತಾರೆ. ಅನಂತರ ಭಾರವಾದ ಮರದ ಪೆಟ್ಟಿಗೆಯಲ್ಲಿ ಆ ಶವವನ್ನಿಡುತ್ತಾರೆ ಆ ಪೆಟ್ಟಿಗೆಯೂ ಕೆಂಪು ಅಥವಾ ಕಪ್ಪು ಬಣ್ಣದ್ದು. ಸತ್ತವನ ಮನೆಯಲ್ಲಿ ಸ್ನೇಹಿತರಿಗೂ ಬಂಧುಗಳಿಗೂ ಭೋಜನ ಏರ್ಪಡಿಸುತ್ತಾರೆ. ದೈವಾಲಯದಲ್ಲಿ ಧರ್ಮಗುರು ಪ್ರಾರ್ಥನೆ ಸಲ್ಲಿಸುತ್ತಾರೆ. ಸತ್ತ ಮೂರು ದಿನಗಳೊಳಗಾಗಿ ಶವಸಂಸ್ಕಾರ ಮಾಡುತ್ತಾರೆ. ಊರಿನ ಹೊರಗಿರುವ ಸಮಾಧಿ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗುತ್ತಾರೆ. ಹಸಿರು ಮತ್ತು ಕೆಂಪು ನಿಲುವಂಗಿಯನ್ನು ತೊಟ್ಟವರು ಶವದ ಪೆಟ್ಟಿಗೆ ಹೊರುತ್ತಾರೆ ಮೆರವಣಿಗೆಯಲ್ಲಿ ಡೋಲು, ಕೊಂಬು ಬಾಣ ಬಿರುಸುಗಳಿರುತ್ತದೆ.

ಭಾರತದಲ್ಲಿ ಸತ್ತವರನ್ನು ಸುಡುವುದೂ ಉಂಟು, ಸಮಾಧಿ ಮಾಡುವುದೂ ಉಂಟು. ಹಿಂದೂಗಳಲ್ಲಿ ಶವಸಂಸ್ಕಾರ ಹಾಗು ಉತ್ತರ ಕ್ರಿಯೆ ಪಂಗಡಗಳಿಗೆ ಅನುಗುಣವಾಗಿ ಅನೇಕ ವಿಧವಾಗಿವೆ. ಅಲ್ಲದೆ ಇವು ಬಹು ವಿಸ್ತಾರ ವಿಧಿಗಳೂ ಹೌದು. ಸಾಮಾನ್ಯವಾಗಿ ಇವು ಸತ್ತ ದಿನದಿಂದ ಹದಿನಾರು ದಿನಗಳವರೆಗೂ ನಡೆಯುತ್ತವೆ. ಅಲ್ಲದೆ, ಒಂದು ವರ್ಷದ ವರೆಗೆ ಪ್ರತಿ ತಿಂಗಳೂ ಅನಂತರ ಪ್ರತಿ ವರ್ಷವೂ ಸತ್ತ ದಿನದಂದು ಅವರ ಸ್ಮರಣಾರ್ಥ ಪೂಜೆ, ಪ್ರಾರ್ಥನೆ, ಅವರ ಆತ್ಮಕ್ಕೆ ಕಾಣಿಕೆ, ಭೋಜನಗಳು ನಡೆಯುತ್ತವೆ. ಹಿಂದೂಗಳಲ್ಲಿ ಸತ್ತ ದಿನವನ್ನು 'ತಿಥಿ' ಎಂದು ಪ್ರತಿ ವರ್ಷವೂ ಆಚರಿಸುತ್ತಾರೆ.

ಪಾರ್ಸಿಗಳಲ್ಲಿ ಶವಸಂಸ್ಕಾರ ಸಾಮಾನ್ಯವಾಗಿ ಬಳಕೆಯಲ್ಲಿರುವ ಪದ್ಧತಿಗಳಿಗಿಂತ ತೀರಾ ಭಿನ್ನ. ಅವರು ಸತ್ತವರ ದೇಹವನ್ನು ಅದಕ್ಕಾಗಿಯೇ ನಿರ್ಮಿಸಲಾಗಿರುವ ಮೌನ ಮಂದಿರಗಳ ಮೇಲೆ ಹದ್ದುಗಳಿಗೆ ಆಹಾರವಾಗಿ ಇಟ್ಟುಬಿಡುತ್ತಾರೆ. ಸತ್ತವರ ದೇಹ ಪವಿತ್ರವಾದ ನೆಲ, ಜಲ, ಅಗ್ನಿಗಳನ್ನು ಸೋಂಕ ಬಾರದೆಂಬುದು ಅವರ ಅಭಿಪ್ರಾಯ, ಅಲ್ಲದೆ ಶವವೂ ಯಾವ ಉಪಯೋಗಕ್ಕಾದರೂ ಒದಗಬೇಕೆಂಬುದು ಅವರ ಅಪೇಕ್ಷೆ.

ಮುಸಲ್ಮಾನರಲ್ಲಿ ಶವಸಂಸ್ಕಾರ ವಿಧಿಗಳು ಸರಳ, ಶವವನ್ನು ಮೆರವಣಿಗೆಯಲ್ಲಿ ಕೊಂಡೊಯ್ದು ಸಮಾಧಿ ಮಾಡಿ ಗೋರಿ ಕಟ್ಟುತ್ತಾರೆ.

ದಕ್ಷಿಣ ಆಫ್ರಿಕದ ಹಾಟೆನ್‌ಟಾಟ್ಸದರಲ್ಲಿ ಸತ್ತವರನ್ನು ಕುಳಿತಿರುವ ಭಂಗಿಯಲ್ಲಿ ಸಮಾಧಿಸ್ಥಳದಲ್ಲಿ ಗುಂಪಿನ ಹಿರಿಯ ಆರಿಸಿದ ಜಾಗದಲ್ಲಿ ಹೂಳುತ್ತಾರೆ. ಸತ್ತವನು ಬದುಕಿರುವವರಿಗೆ ಒಳ್ಳೆಯದನ್ನಾಗಲಿ ಕೆಟ್ಟದ್ದನ್ನಾಗಲಿ ಮಾಡಬಲ್ಲನೆಂಬ ನಂಬಿಕೆಯಿಂದ್ಧ ಗೋರಿಗಳನ್ನು ಬಹಳ ಮರ್ಯಾದೆಯಿಂದ ಕಾಣುತ್ತಾರೆ.

ಪಶ್ಚಿಮ ಆಫ್ರಿಕದಲ್ಲಿರುವ ಅಶಂತಿ ಜನ ಸತ್ತವನು ಸ್ವರ್ಗ ಸೇರಲು ಐದು ದಿನ ಬೆಟ್ಟಹತ್ತಬೇಕೆಂಬ ನಂಬಿಕೆ ಇಟ್ಟುಕೊಂಡಿದ್ದಾರೆ. ಯಾರಾದರೂ ಸತ್ತ ಕೂಡಲೆ ಹಳ್ಳಿಯ ಹಿರಿಯನಿಗೆ ಸುದ್ದಿ ಮುಟ್ಟುತ್ತದೆ. ಶವಸಂಸ್ಕಾರದ ಸಮಯದಲ್ಲಿ ಆತ ಹಾಜರಿರಲೇ ಬೇಕು. ಶೋಕಿಸುವವರು ಹಣೆಗೆ, ತೋಳಿನ ಮೇಲು ಭಾಗಕ್ಕೆ ಕೆಮ್ಮಣ್ಣು ಹಚ್ಚಿಕೊಂಡು ತುಕ್ಕು ಬಣ್ಣದ ಬಟ್ಟೆಗಳನ್ನುಟ್ಟು ಐದು ದಿನ ಉಪವಾಸ ಮಾಡುತ್ತಾರೆ. ಶವಸಂಸ್ಕಾರಕ್ಕೆ ಮೊದಲು, ಶವಸಂಸ್ಕಾರದ ಸಮಯದಲ್ಲಿ ಮತ್ತು ಅನಂತರ ಶೋಕಗೀತೆಗಳನ್ನು ಹಾಡುತ್ತಾರೆ.

ಈಚಲನೆಗೆ ಶವದ ಪೆಟ್ಟಿಗೆಯನ್ನು ಉಪಯೋಗಿಸಿದರೂ ಶವವನ್ನು ಚಾಪೆಯಲ್ಲಿ ಸುತ್ತುವುದು. ಸಾಧಾರಣ ಮೂರು ದಿನವಾದ ಮೇಲೆ ಶವವನ್ನು ಸಮಾಧಿಸ್ಥಳದಲ್ಲಿ ಮಣ್ಣು ಮಾಡುತ್ತಾರೆ.

ಅಲ್ಲಿರುವವೆಲ್ಲ ಸ್ವಲ್ಪ ದ್ರಾಕ್ಷಾರಸವನ್ನು ಕುಡಿದು, ಸ್ವಲ್ಪ ದ್ರಾಕ್ಷಾರಸವನ್ನು ನೆಲದ ಮೇಲೂ ಚೆಲ್ಲುತ್ತಾರೆ.

ಅಮೆರಿಕದ ಇಂಡಿಯನರಲ್ಲಿ ವಿವಿಧ ಶವಸಂಸ್ಕಾರ ವಿಧಾನಗಳಿವೆ. ಢಕೋನ ಪ್ರಾಂತದ ಇಂಡಿಯನರು ನೆಲದಿಂದ ಎತ್ತರದಲ್ಲಿರುವ ಮರದ ವೇದಿಕೆಯ ಮೇಲೆ ಸತ್ತವರ ದೇಹವನ್ನು ಒಂದು ವರ್ಷಕಾಲ ಇಟ್ಟಿದ್ದು ಅನಂತರ ಅದನ್ನು ತೆಗೆದು ಹೂಳುತ್ತಾರೆ.

ಇತ್ತೀಚಿನ ಕ್ರೈಸ್ತ ಶೋಕತಪ್ತರು ಒಂದು ನಿರ್ದಿಷ್ಟ ಅವಧಿಯವರೆಗೆ ಯಾವಾಗಲೂ ಕಪ್ಪು ಬಟ್ಟೆಗಳನ್ನು ಧರಿಸುತ್ತಿದ್ದರು. ಇದು ಕ್ರೈಸ್ತನ ಕಾಲಕ್ಕೂ ಹಿಂದಿನಿಂದ ಬಂದ ಪದ್ಧತಿ, ಕಪ್ಪು ಬಟ್ಟೆಗಳು ಸತ್ತವನ ಬಂಧುಬಳಗವನ್ನು ಮುಚ್ಚಿಬಿಡುವುದರಿಂದ ಸತ್ತವನ ಆತ್ಮ ಅವರನ್ನು ಗುರುತಿಸಿ ಪೀಡಿಸಲಾರದು ಎಂಬುದೇ ಕಪ್ಪು ಬಟ್ಟೆಯನ್ನು ಧರಿಸುವುದರ ಹಿಂದಿನ ಉದ್ದೇಶ. ಈಗ ಕಪ್ಪು ದುಃಖ ಸೂಚಕ ಎಂದು ಅದನ್ನು ಬಳಸುತ್ತಾರೆ.

ಕ್ರೈಸ್ತ ಧರ್ಮಾವಿರುವ ದೇಶಗಳಲ್ಲಿ ಶವವನ್ನು ಮರದ ಶವದ ಪೆಟ್ಟಿಗೆಯಲ್ಲಿಟ್ಟು ಸಮಾಧಿ ಮಾಡುತ್ತಾರೆ. ಇಗರ್ಜಿಯಲ್ಲೂ ಸ್ಮಶಾನದಲ್ಲೂ ಪ್ರಾರ್ಥನಾವಿಧಿಗಳಾಗುತ್ತವೆ.

ಯೆಹೂದ್ಯರಲ್ಲೂ ಸುಡುವುದು ನಿಷಿದ್ಧ, ಒಂದು ವಾರ ಕಾಲ ಶೋಕವನ್ನಾಚರಿಸುತ್ತಾರೆ.

ಸತ್ತವರ ಚೇತನಗಳು ಪುನಃ ಬಂದು ತಮ್ಮ ಜೀವನವನ್ನು ಅಂದಗೆಡಿಸಬಹುದೆಂದು ಭಾವಿಸಿ ಕೆಲವರು ವಿಶಿಷ್ಟ ಕ್ರಮ ಅನುಸರಿಸುತ್ತಾರೆ. ಶವ ಸಂಸ್ಕಾರವನ್ನು ಅವರು ಮಾಡುವುದು ರಾತ್ರಿ ಸಮಯದಲ್ಲಿ. ಇದರಿಂದ ಕತ್ತಲೆಯಲ್ಲಿ ದಾರಿ ಕಾಣದಂತಾಗಿ ಆ ಚೇತನಗಳು ತಿರುಗಿ ಬರುವುದಿಲ್ಲ ಎಂದು ಅವರ ನಂಬಿಕೆ. ಕೆಲವು ದೇಶಗಳಲ್ಲಿ ಮನೆಯ ಬಾಗಿಲು ತೆರೆದು ಹೆಣಗಳನ್ನು ಒಯ್ಯುವುದಿಲ್ಲ. ಅದರ ಬದಲು ಗೋಡೆಯಲ್ಲಿ ದುಂಡಗೆ ಕೊರೆಯುತ್ತಾರೆ. ಹೆಣ ಹೊರಗೆ ತೆಗೆದ ತಕ್ಷಣ, ಆ ಗೋಡೆಯನ್ನು ಮುಚ್ಚಿಬಿಡುತ್ತಾರೆ.

ಕೆಲವು ದೇಶಗಳಲ್ಲಿ ಹೆಣಗಳ ಕಾಲುಗಳನ್ನು ಮಡಿಸಿ ಒಯ್ಯುತ್ತಾರೆ. ಇದರಿಂದ ಚೇತನಗಳು ತಿರುಗಿ ಬರಲು ಶಕ್ತವಾಗುವುದಿಲ್ಲ ಎಂದು ನಂಬಿಕೆ. ಸ್ವೀಡನ್ನಿನಲ್ಲಿ ಮನೆಯ ಬಾಗಿಲಿನೆದುರು ಬೀಜಗಳನ್ನು ಚೆಲ್ಲುತ್ತಾರೆ. ಅವುಗಳನ್ನು ಎಣಿಸುತ್ತ ಚೇತನ ಮನೆಯೊಳಗೆ ಬರುವುದನ್ನು ಮರೆತು ಬಿಡುತ್ತದಂತೆ. ಕೆಲವರು ಹೆಣಗಳನ್ನು ಜಲಾಶಯದ ಆಚೆಗೆ ಒಯ್ದು ಶವಸಂಸ್ಕಾರ ಮಾಡುತ್ತಾರೆ, ಚೇತನ ನೀರಮೇಲೆ ಓಡಾಡುವುದಿಲ್ಲವೆಂದು ಅವರ ವಿಶ್ವಾಸ.

ಜೀವನದ ಅನೇಕ ರೀತಿನೀತಿಗಳು ಬದಲಾದಂತೆ ಶವಸಂಸ್ಕಾರ ಪದ್ಧತಿಗಳೂ ಬದಲಾಗುತ್ತಿವೆ. ಈಗ ಶವವನ್ನು ರುದ್ರಭೂಮಿಗೆ ಕೊಂಡೋಯ್ಯುವ ವಾಹನಗಳಿವೆ. ಸ್ಥಳಾಭಾವದ ಕಾರಣದಿಂದಲೂ ಆರೋಗ್ಯದ ಕಾರಣದಿಂದಲೂ ವಿದ್ಯುತ್ ಯಂತ್ರದ ಮೂಲಕ ಶವವನ್ನು ದಹನ ಮಾಡುವ ಪದ್ಧತಿ ರೂಢಿಗೆ ಬಂದಿದೆ.

ಶವಸಂಸ್ಕಾರ ಹಾಗೂ ಉತ್ತರಕ್ರಿಯೆಗಳ ವಿಧಾನ ಸರಳವಾಗಿರಬಹುದು. ವಿಸ್ತಾರವಾಗಿರಬಹುದು. ಇಲ್ಲಿ ನೂರಾರು ಬಗೆಯ ವೈವಿಧ್ಯವನ್ನು ನೋಡಬಹುದು. ಆದರೆ ಎಲ್ಲದರ ಉದ್ದೇಶ ಒಂದೇ. ಅದು ಸತ್ತವರಿಗೆ ಅರ್ಪಿಸುವ ಗೌರವ, ಶ್ರದ್ಧಾಂಜಲಿ.

**ಸಂಗ್ರಹ : ಆಕರ, ಜ್ಞಾನ ಗಂಗೋತ್ರಿ**

**ಕುಂಭಗೌಡನ ರಂಜಿತ್, ಮಕ್ಕಂದೂರು**

## ನಗೆ ಹನಿ

**ಸುನಿಲ್ :** ಅನಿಲ್, ನಿನ್ನ ಗೂಡೆ ಯಾಗೋಳ್ 10ಗಂಟೆಗೆ ಎಲ್ಲಿಗೆ ಹೋದುರಾ?

**ಅನಿಲ್ :** ಅವಳು ಕಟ್ಟಿಂಗ್ ಕ್ಲಾಸಿಗೆ ಹೋದು, ಮನೆಲಿ ಕುದ್ದುಕಂಡ್ ತಾನೇ ಏನ್ ಮಾಡ್‌ದು ಹೇಳ್, ಹರ್‌ದದ್ ಪರ್‌ದದ್ ಆದರ್ ಹೊಲಿಯಕ್ಕೆ ಕಲಿಯಕ್ಕೆ ಕಳ್‌ಸಿತ್ತ ಒಳೆ,

**ಸುನಿಲ್ :** ನನ್ನವಳಿಗೆ ಸ ಅಸ್ಟೆ ಪುರುಷೋತ್ತೆ ಇಲ್ಲೇ

**ಅನಿಲ್ :** ಯಾಕೆ?

**ಸುನಿಲ್ :** ಪಕ್ಕದ ಮನೆ ಹೆಣ್ಣ್‌ಜನ ಒಳೊ ಆ ಮನೆ ಈಮನೆ ಸುದ್ದಿನ ಹೇಳ್‌ಕಂಡ್ ಇದ್ದದೇ ಅವುಕ್ಕೇ ಪುರುಷೋತ್ತೆ ಇಲ್ಲೆ. ಅಲ್ಲಾ, ಅಲ್ಲಿ ಏನೆಲ್ಲಾ ಕಲಿಸುವೇ

**ಅನಿಲ್ :** ಅಲ್ಲಿ ಕಟ್ಟಿಂಗ್, ನಿಟ್ಟಿಂಗ್ ಎಲ್ಲಾ ಕಲಿಸುವೇ

**ಸುನಿಲ್ :** ನಮ್ಮವಳು ಒಟ್ಟು ಯಾಗೋಳ್ ಅಕ್ಕ ಪಕ್ಕದ ಮನೆಗಳಿಗೆ ಹೋಗಿ ಪಿಟ್ಟಿಂಗ್ ಇಟ್ಟ್ ಬುಟ್ಟ್ ಬಂದದ್ದೆ. ಅದೇ ಕೆಲಸ ಹಂಗಾಗಿ ಪುರ್‌ಸೊತ್ತೇ ಇಲ್ಲೆ, ಪಾಪ.

**ಆಜದ್ಕ ರಾಣಿ ಬಾಲಕೃಷ್ಣ, ಕುಶಾಲ ನಗರ.**

ಕಲಿಕಾಲದಲ್ಲಿ ಏನು ಪುಣ್ಯ ಮಾಡಿದರು ಫಲ ನಿಧಾನವೇ ಸೈ

# ವಿಡಂಬನೆ : ನಾನ್ ಮಾಡ್ದ ಪಾಪನ ದೇವುರು ಕೂಡ ಕ್ಷಮಿಸಿತ್‌ಲೆ

ಬಾಹಳ ದಿನಂದ ನನ್ನ ಮನ್ಸ್ ಏನೋ ಒಂದುತರದ ಮಾನಸಿಕ ಡೋಳಾಯಮಾನಸ್ಥಿತಿಲಿ ಒದ್ದಾಡ್ತಾ ಇತ್ತ್. ಕಾಫಿ, ತೋಟಂದ ಬಂದ ಹೆಣ್ಣ್‌ನ ಕರ್ಡ್ ಹೇಳ್ದೆ. ಏನ್‌ನೆ ನಂಗೆ ಮನ್ಸೆ ಸರಿ ಇಲ್ಲೆ, ಯಾವ ಕೆಲ್ಸನು ಮಾಡಿಕೆ ಮನ್ಸ್ ಬಾದುಲೆ, ಪ್ಯಾಟೆಗೆ ಹೋಗಿ ಒಂದು ಪೆಗ್ ಹಾಕಿ ಬಂದರೆ ಸಾಂಯಿಕಾಲ ಲಾಯಿಕ್ ನಿದ್ದೆ ಮಾಡಕ್, ಆ ಸುರಾಲ್ ಕೊಡು ಎಲ್ಲಿಟ್ಟು ತೇಳ್ದೆ. ಸಾಯಿಂಕಾಲ ಮುಟ್ಟ ತೋಟಲಿ ಕೆಲ್ಸ ಮಾಡಿಬಂದ್ ಸುಸ್ತು ಬ್ಯಾರೆ ಆಗಿಟ್ಟು. ಅದರ ಒಟ್ಟಿಗೆ ಮನೆಗೆ ಬಂದಂಗೆ ಸ್ಕೂಲ್‌ದ ಬಂದ ಮಕ್ಕ, ಹಂದಿ, ಕೋಳಿ, ನಾಯಿ ತೇಳಿ ಹಂಗೇನೇ ಸೌದೆ, ನೀರ್ ಮನೆಗುಡ್ಸುದುತಾ ಬಾರಿ ಮೊತ್ತದ ಕೆಲ್ಸದ ಸಿಟ್ಟ್, ಸಿಡ್‌ಕಾಟ ಇರ್‌ಕಾಕನ ನನ್ನ ಅವಾಹಲ್ ಅವುಳು ಕೈಪಾಲ್ ಮ್ಯಾಲೆ ಹೊಡ್ದಂಗೆ ಆತ್.

ಅವಳಿಗೆ ಬಿ.ಪಿ. ರೈಸ್ ಆತ್. ಉರಿದುಂಡು ಮಾಡಿಕಂಡ್ ಅಲ್ಲೇ ಬಾಗ್ಲಲಿ ಮಲ್ಗಿದ್ದ ನಾಯಿಗೆ ಹಿಡಿ ಚೀಪೆಲಿ ನಿಮಿಗೆ ಬ್ಯಾರೆ ಕೆಲ್ಸ ಇಲ್ಲೆ, ಸುಮ್ಮನೆ ಹುಕ್ಕಿ ಮಲ್ಗಿ ತೇಳಿ ಇರುವ ಒಂದು ಸುರಾಲ್, ಸರ್ಟ್‌ನ ನೀರಿಗೆ ಹಾಕಿ ಒಗೆಯಕುತ್ತೇಳಿ ಅಂಟಳ ಕಾಯಿ ತಕಂಡ್ ಸೀದಾ ತೋಡಿಗೆ ಹೋತ್.

ನಾನ್ ಅಲ್ಲೆ ಜಗಲ್‌ಲಿ ಕುದ್ದ್ ನಾಲ್ಕ್ ಬೀಡಿನ ಎಳ್ದ್ ಮುಗ್ಸಿ ಕತ್ತಲೆ ಆದಂಗೆ ಕೈಕಾಲ್ ತೊಳ್ದ್ ತೆರ್ಮೆ ಸೊಪ್ಪು ಹೊರ್ದದರ್ಲಿ ನಾಲ್ಕ್ ಬಾಯಿ ಉಂಡ್ ಕಾಸಿದ ಎಮ್ಮೆ ಹಾಲ್ ಕುಡ್ದ್ ಮಲ್ಗಿದೆ. ಅವುಳು ಊಟಾ ಮಾಡಿ ಪಾತ್ರನೆಲ್ಲಾ ಕೊತ್ತಿ ಮಗ್ಚುದುತಾ ಕಪಾಟ್‌ಲಿ ಮಡ್ಗಿ ಸೀಮೆ ಎಣ್ಣೆ ದೀಪ ಅರ್ಸಿ ಮಲ್ಗಿತ್. ಸ್ವಲ್ಪ ಹೊತ್ತು ಕಳ್ದಂಗೆ ಬಲರಿಯಾ ನೀವು ನಾಳೆ ದೇವಸ್ಥಾನಕ್ಕೆ ಹೋಗಿ ಬನ್ನಿ, ಮನ್ಸ್ ಸಮಾದಾನ ಆದೇತಾ, ಹು. ಹಾಂ ತೇಳದೆ ಮಲ್ಗಿದ ನಾನ್ ಬೆಳಿಗೆ ಎದ್ದ್ ಗುಡ್ಡದ ಒಲೆಗೆ ಕಿಚ್ಚ್ ಹಾಕಿ ಬಿಸಿ ನೀರ್ ಸ್ನಾನ ಮಾಡಿ ಒಂದು ತೆಂಗಿನ ಕಾಯಿ ಚೊಲ್ಲಿ ಪ್ಲಾಸ್ಟಿಕ್ ಬ್ಯಾಗಲಿ ಹಾಕಿ ದೇವಸ್ಥಾನದ ದಾರಿ ಹಿಡ್ದೆ. ಹೋದಂಗೆ ಸ್ವಾಮಿಗೆ ಹೇಳ್ದೆ ಒಂದು ಮಂಗಳಾರತಿ ಮಾಡೋಕುತಾ ಯಾಕೆತಳ್ರೆ ಅಲ್ಲಿ ನಮಿಗೂ ಮತ್ತೆ ದೇವರಿಗೂ ಮಧ್ಯದ ದಳ್ಳಾಳಿ ಅರ್ಚಕತಾನೆ. ಅಂದಂವ ಮಾರಾಯರೆತ ಮಂಗಳಾರಿತಿ ತಟ್ಟೆಗೆ ಕರ್ಪೂರ ಹಾಕಿ ನನ್ನ ಹೆಸರ್, ರಾಶಿ, ನಕ್ಷತ್ರ ಕೇಳ್ತ್. ಮತ್ತೆ ಮಂಗಳಾರತಿ ಮಾಡ್ತ್. ದೇವುರು ಆದೇ ನಿಲುವುಲಿ ಇತ್ತ್. ಅವನ ಅಭಯ ಹಸ್ತ ಹಂಗೆ ಇದ್ದ್ ಕಣ್ಣ್ ಮುಚ್ಚಿಕಂಡಿರುವ ಭಂಗಿನ ನೋಡ್ರೆ ಅವನ ಪಾಪ ಅವಂಗೇ... ಇಲ್ಲಿ ತೆಳುವಂಗೆ. ಅರ್ಚಕ ತಟ್ಟೆನ ನನ್ನ ಹತ್ರ ತಾತ್, ನಾನೊಮ್ಮೆ ಬಗ್ಗಿ ನೋಡ್ದೆ ಪಾಪ ತೇಳ್ದು ಕರ್ಪೂರದ ಬೆಂಕಿಲಿ ಧಗಧಗಿಸಿ ಉರಿತಿತ್ತ್. ನನ್ನ ಪಾಪ ಇಷ್ಟೊಂದು ಉಟ್ಟಾತಾ ಅದರ ನೋಡಿಕೆ ಅದುಲೆತಾ ಅದಿಕ್ಕೆ ಎರಡೂ ಕೈ ಮುಚ್ಚಿ ಮತ್ತೆ ಕಣ್ಣ್‌ನಾ ನಾ ಮುಚ್ಚಿಕಂಡೆ. ನನ್ನ ಪಾಪನ ನನ್ನ ಕಣ್ಣ್‌ಲಿಸಾ ನೋಡಿಕೆ ಆದುಲೆತೇಳಿ ನನ್ನ ಪಾಪನ ನಾನೇ ಹೊತ್ತ್ ತಿರ್‌ಗಿನೆತಾ ನಿಂತಲ್ಲೆ ಸುತ್ತ್ ಬಂದ್ ಹಣ್ಣ್‌ಕಾಯಿ ಪ್ರಸಾದ ತಕಂಡ್ ಮನೆಗೆ ಬಂದೆ. ದೇವಸ್ಥಾನಕ್ಕೆ ಹೋಗಿ ಭಾರ ಆದ ಮನ್ಸ್ ಸ್ವಲ್ಪ ಹಗ್‌ರ ಆತ್. ಅಂತೂ ಒಂದು ನಿರ್ಧಾರಕ್ಕೆ ಬಂದೆ. ನಾನ್ ಮಾಡ್ದ ಪಾಪನ ದೇವುರು ಕೂಡ ಕ್ಷಮಿಸಿತ್‌ಲೆ. ನಾನ್ ತಿಳ್ದೂ, ತಿಳಿಯದೆನೋ ಬಾಹಳ ಪಾಪ ಮಾಡಿಯೋಳೆ. ಆದರೆ ಇನ್ನ್ ಮುಂದೆ ಯಾವುದೇ ಪಾಪಕತ್ಯನ ಮಾಡುದುಲೆತಾ. ಈಗ ಸ್ವಲ್ಪ ನೆಮ್ಮದಿಲಿ ಒಳೆ.

**ತೆಕ್ಕಡೆ. ಬಿ. ಕುಮಾರ್, ಶಿಕ್ಷಕ, ಮುತ್ತಾರ್ಮುಡಿ.**

---

## ಕೊಡಗು ಜಿಲ್ಲೆ

ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು.

ಬ್ರಹ್ಮಗಿರಿ, ಇಗ್ಗುತಪ್ಪ, ತಡಿಯಾಂಡ ಮೋಳು ಬೆಟ್ಟ
ಸುಬ್ರಮಣ್ಯ, ದೇವಾಸಿ ಸೀಮೇ ಸಾಲುಗಳೇ ಮಡಿಕೇರಿಪೀಠ
ಕಾವೇರಿ, ಹಾರಂಗಿ, ಹೇಮಾ, ಲಕ್ಷ್ಮಣ ತೀರ್ಥ ಮಹಾಪೂರ ಪೊಳೆಯಿಸಿ
ತಳದ ಜಲವ ಪಚ್ಚೆ ಹಾರ್‍ಯಿಸಿ ಬೆಳೆ ಬೆಳೆಯಿಸಿ
ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು ||

ಗಂಗಾ, ಕದಂಬ, ಚೆಂಗಾಳ್ವರ, ಹಾಲೇರಿ ಆಳಿದ
ಚಂದ್ರವರ್ಮ, ಮುದ್ದುರಾಜ, ಟಿಪ್ಪು, ಲಿಂಗರಾಜೇಂದ್ರರ ನಾಡಿದು
ಕರುನಾಡು ಅರಸರ ಕದನ ಸಿರಿಮುಡಿ ಏರಿದ
ಕೊಡಗು ಚರಿತ್ರೆಯ ಅಮರ ಧರಿತ್ರಿದು
ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು ||

ಅಗಸ್ತ್ಯತಪದ ಬ್ರಹ್ಮಗಿರಿ, ರಾಮಕೃಷ್ಣಾ ಶಾರದ, ಆಶ್ರಮ
ಪಾಪ-ಪಾವನೆ ಲೋಪ ಮುದ್ರೆ ನೀರೆ ಧೀರೆ,
ಕೋಟೆ, ಓಂಕಾರೇಶ್ವರ, ತಲಕಾವೇರಿ ಭಗಂಡೇಶ್ವರ
ಆತಿಥ್ಯ ಕಾಣುವ ಆಗರದ ರಾಜಸೀಟು
ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು ||

ಕೊಡಗಿನ ಗೌರಮ್ಮ, ಭಾರತೀಸುತ ಕಾಕೇಮನಿ
ಕನ್ನಡ ಸಾಹಿತ್ಯ ಸೇವೆ ಅರಳಿದ ಕೀರ್ತಿ ತಂದ ಜಿಲ್ಲೆಯಿದು
ಜನರಲ್ ಕಾರ್ಯಪ್ಪ. ಜನರಲ್ ತಿಮ್ಮಯ್ಯ
ಸ್ಥೈರ್ಯ, ಪರಾಕ್ರಮ ಯೋಧರ ತಾಯ್ನಾಡಿದು
ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು ||

ಸೋಮವಾರ ಪೇಟೆ, ವಿರಾಜಪೇಟೆ, ಮಡಿಕೇರಿ
ಸುತ್ತುವರಿದೀಹ ಕೊಡಗು ಬನ ಕೇರಿ
ವನ್ಯ ಮೃಗ ನಾಗರಹೊಳೆ. ಜೇನು ರಸಹಣ್ಣು ಉದ್ದಿಮೆ
ಅಚ್ಚ ಎಲಗೂಸು ಮೌಲ್ಯದ ಕೃಷಿ ಸಂಪತ್ತು
ನಮ್ಮ ಕೊಡಗು ಜಿಲ್ಲೆ ನಮ್ಮದು
ಕಾಶ್ಮೀರ ಸೊಗಡಿನ ಊರಿದು ||

**ಯುಮುನ ಕೊಳಂಗಾಯ, ಪೆರಾಜೆ**

---

ಎಳ್ಳನ್ನು ಏಳು ಭಾಗ ಮಾಡಿ ಹಂಚಿಕೊಳ್ಳಿ ಮಕ್ಕಳ್ರೇ - ನೀಲವ್ವ

# ಆರ್ಯಭಟದಿಂದ ಇನ್ಸಾಟ್ -2ಇ ವರೆಗೆ

ಭಾರತೀಯ ಬಾಹ್ಯಾಕಾಶ ಕಾರ್ಯಕ್ರಮದ ಮೈಲಿಗಲ್ಲು ಈ ರೀತಿ ಇವೆ.

| ಉಪಗ್ರಹ | ದಿನಾಂಕ | ಉದ್ದೇಶ | ಉಡ್ಡಯನ ಕೇಂದ್ರ | ಫಲಿತಾಂಶ |
|---|---|---|---|---|
| ಆರ್ಯಭಟ | 19-4-1975 | ವೈಜ್ಞಾನಿಕ | ಯುಎಸ್‌ಎಸ್‌ಆರ್ | ಯಶಸ್ವಿ |
| ಭಾಸ್ಕರ-1 | 7-6-79 | ಭೂ ಪರಿವೀಕ್ಷಣೆ | ಯುಎಸ್‌ಎಸ್‌ಆರ್ | ಯಶಸ್ವಿ |
| ರೋಹಿಣಿ | 10-8-79 | ಭೂ ಪರಿವೀಕ್ಷಣೆ | ಎಸ್‌ಎಲ್‌ವಿ3 | ವಿಫಲ |
| ರೋಹಿಣಿ | 18-7-80 | ಭೂ ಪರಿವೀಕ್ಷಣೆ | ಎಸ್‌ಎಲ್‌ವಿ-3 | ಯಶಸ್ವಿ |
| ರೋಹಿಣಿ | 31-5-81 | ವೈಜ್ಞಾನಿಕ | ಎಸ್‌ಎಲ್‌ವಿ-3 | ಯಶಸ್ವಿ |
| ಆ್ಯಪಲ್ | 19-6-81 | ಸಂಪರ್ಕ | ಏರಿಯಾನ | ಯಶಸ್ವಿ |
| ಭಾಸ್ಕರ-2 | 20-11-81 | ಭೂ ಪರಿವೀಕ್ಷಣೆ | ಯುಎಸ್‌ಎಸ್‌ಆರ್ | ಯಶಸ್ವಿ |
| ಇನ್ಸಾಟ್-1ಎ | 10-4-82 | ವಿವಿದೋದ್ದೇಶ | ಬಿಎಲ್‌ಟಿವಿ | ವಿಫಲ |
| ರೋಹಿಣಿ | 17-4-83 | ವೈಜ್ಞಾನಿಕ | ಎಸ್‌ಎಲ್‌ವಿ-3 | ಯಶಸ್ವಿ |
| ಇನ್ಸಾಟ್-1ಬಿ | 30-8-83 | ವಿವಿಧೋದ್ದೇಶ | ಬಾಹ್ಯಾಕಾಶ | ಯಶಸ್ವಿ |
| ಸ್ರೋಸ್-1 | 24-3-87 | ತಾಂತ್ರಿಕ | ಎಎಸ್‌ಎಲ್‌ಬಿ | ವಿಫಲ |
| ಐಆರ್‌ಎಸ್-1ಎ | 17-3-88 | ದೂರಸಂವೇದಿ | ಯುಎಸ್‌ಎಸ್‌ಆರ್ | ಯಶಸ್ವಿ |
| ಸ್ರೋಸ್-2 | 13-7-88 | ತಾಂತ್ರಿಕ | ಎಎಸ್‌ಎಲ್‌ವಿ | ವಿಫಲ |
| ಇನ್ಸಾಟ್-1ಸಿ | 21-7-88 | ವಿವಿಧೋದ್ದೇಶ | ಏರಿಯಾನ | ವಿಫಲ |
| ಇನ್ಸಾಟ್-1ಡಿ | 12-6-90 | ವಿವಿಧೋದ್ದೇಶ | ಡೆಲ್ಟಾ | ಯಶಸ್ವಿ |
| ಐಆರ್‌ಎಸ್-1ಬಿ | 29-8-91 | ದೂರ ಸಂವೇದಿ | ಯುಎಸ್‌ಎಸ್‌ಆರ್ | ಯಶಸ್ವಿ |
| ಸ್ರೋಸ್-3 | 20-5-92 | ವೈಜ್ಞಾನಿಕ | ಎಎಸ್‌ಎಲ್‌ವಿ | ಯಶಸ್ವಿ |
| ಇನ್ಸಾಟ್-2ಎ | 10-7-92 | ವಿವಿಧೋದ್ದೇಶ | ಡೆಲ್ಟಾ | ಯಶಸ್ವಿ |
| ಇನ್ಸಾಟ್-2ಬಿ | 23-7-93 | ವಿವಿಧೋದ್ದೇಶ | ಏರಿಯಾನ | ಯಶಸ್ವಿ |
| ಐಆರ್‌ಎಸ್-1ಇ | 20-9-93 | ದೂರ ಸಂವೇದಿ | ಪಿಎಸ್‌ಎಲ್‌ವಿಡಿ-1 | ವಿಫಲ |
| ಸ್ರೋಸ್-4 | 4-5-94 | ವೈಜ್ಞಾನಿಕ | ಎಎಸ್‌ಎಲ್‌ವಿ | ಯಶಸ್ವಿ |
| ಐಆರ್‌ಎಸ್-ಪಿ2 | 15-9-94 | ದೂರ ಸಂವೇದಿ | ಪಿಎಸ್‌ಎಲ್‌ವಿ-ಡಿ-2 | ಯಶಸ್ವಿ |
| ಇನ್ಸಾಟ್-2ಸಿ | 7-12-95 | ದೂರಸಂಪರ್ಕ | ಏರಿಯಾನ | ಯಶಸ್ವಿ |
| ಐಆರ್‌ಎಸ್-1ಸಿ | 28-12-95 | ದೂರ ಸಂವೇದಿ | ಯುಎಸ್‌ಎಸ್‌ಆರ್ | ಯಶಸ್ವಿ |
| ಐಆರ್‌ಎಸಂ-ಪಿ3 | 21-3-96 | ದೂರ ಸಂವೇದಿ | ಪಿಎಸ್‌ಎಲ್‌ವಿ-ಡಿ3 | ಯಶಸ್ವಿ |
| ಇನ್ಸಾಟ್-2ಡಿ | 4-6-97 | ದೂರಸಂಪರ್ಕ | ಏರಿಯಾನ | ವಿಫಲ |
| ಐಆರ್‌ಎಸ್-1ಡಿ | 29-9-97 | ದೂರ ಸಂವೇದಿ | ಪಿಎಸ್‌ಎಲ್‌ವಿ | ಯಶಸ್ವಿ |
| ಇನ್ಸಾಟ್-2ಇ | 3-4-99 | ವಿವಿಧೋದ್ದೇಶ | ಏರಿಯಾನ | ಯಶಸ್ವಿ |

**ಸಂಗ್ರಹ : ಕೋಳಿಮುಡಿಯನ ಮಿಲನ್ ಅನಂತ್‌ಕುಮಾರ್, ಗಾಳಿಬೀಡು**

---

| **ಕವನ** | **ಕೃತಿ** | **ಗೆಳತಿ** | **ದೇವರು** | **ಕಹಿ ನೆನಪು** |
|---|---|---|---|---|
| ಮನುಷ್ಯನ | ಪುಷ್ಪಗಳ | ದುಃಖವ | ಸಂತಸದಲಿ | ಬಾಳೆಂಬ.... |
| ಅಂತರಾಳದ | ಸಮೂಹ | ಮರೆಸುವಾಕೆ | ನಮಗೆ..... | ಪುಸ್ತಕದಿ, |
| ಭಾವನೆಗಳ | ಕಾವ್ಯ | ಒಳ ದನಿಗೆ | ಮರೆವಾತ | ನೆನಪೆಂಬ |
| ಸುಂದರ | ಹೂಗಳನಾರಿಸಿ | ಸ್ಪಂದಿಸುವಾಕೆ | ಕಷ್ಟದಲಿ.... | ಪುಟದಿ |
| ಶಬ್ದಗಳ | ಕಟ್ಟಿದ | ಸಂತೋಷವ | ನೆನಪಿಗೆ | ಕಪ್ಪು ಚುಕ್ಕೆ |
| ಹೊಂದಾಣಿಕೆ | ಹೂಮಾಲೆ | ಬೆರೆಸುವಾಕೆ | ಬರುವಾತ | ಮೂಡಗದ್ದೆ ಕೃಪಾ ಈರಪ್ಪ |

---

ತನಗೆ ಕೆಡುಕಾದರು ಪರರಿಗೆ ಕೇಡು ಬಯಸದಿರು

# ಕೊಡಗಿನಲ್ಲಿ ಹಳೆಯ ಭೂ ಹಿಡುವಳಿ ಪದ್ಧತಿ ರದ್ದು

## ಜಮಾಬಂದಿ ಬದಲು ಆರ್‌ಟಿಸಿ ಜಾರಿಗೆ

ಮಹತ್ವದ ಬೆಳವಣಿಗೆಯೊಂದರಲ್ಲಿ ಕರ್ನಾಟಕ ಸರಕಾರವು ಕೊಡಗಿಗೆ ಮಾತ್ರ ಸಂಬಂಧಿಸಿದಂತೆ ೩೭ ವಿಧದ ಭೂ ಹಿಡುವಳಿ ಹಕ್ಕನ್ನು ರದ್ದುಗೊಳಿಸಿದೆ. ಕರ್ನಾಟಕ ಹೈಕೋರ್ಟ್ ೧೯೯೩ರಲ್ಲಿ ನೀಡಿದ ವಿಶೇಷ ತೀರ್ಪಿನನ್ವಯ ಪ್ರಸ್ತುತ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಿ ಈ ಆದೇಶ ಹೊರಡಿಸಿದೆ.

೧೮೯೯ರ ಕೂರ್ಗ್ ಲ್ಯಾಂಡ್ ರೆವಿನ್ಯೂ ರೆಗ್ಯುಲರೈಸೇಶನ್ ಅನ್ನು 1964ರ ಕರ್ನಾಟಕ ಭೂ ಕಂದಾಯ ಕಾಯ್ದೆಯ ಸೆಕ್ಷನ್ ೨೦೨ ರದ್ದುಗೊಳಿಸಿತ್ತು. ಜಮಾಬಂದಿ ಬದಲು (ಕೊಡಗು ಜಿಲ್ಲೆಯಲ್ಲಿರುವ ಭೂ ಹಿಡುವಳಿಗಳ ವಾಸ್ತವ ವಿವರಗಳನ್ನು) ಪಹಣಿ ಅಥವಾ ಆರ್‌ಟಿಸಿ (ಹಕ್ಕಿನ ದಾಖಲೆ)ಯನ್ನು ಜಾರಿಗೆ ತರಲಾಗುವುದು. ಈಗ ಈ ಭೂ ದಾಖಲೆಗಳ ಗಣಕೀಕರಣ ಭರದಿಂದ ಸಾಗಿದೆ. ಧಾರ್ಮಿಕ ದತ್ತಿಗೆ ನೀಡಿದ ಭೂಮಿಯನ್ನೂ ಈ ಪರಿಧಿಯಲ್ಲಿ ಸೇರಿಸಲಾಗಿದೆ.

ಕೊಡಗಿನಲ್ಲಿರುವ ೩೭ ವಿಧದ ಭೂ ಗುತ್ತಿಗೆಗಳೆಂದರೆ "ಬಾಣೆ, ಹಿತ್ಲು ಮತ್ತು ಹಿತ್ಲುಮನೆ ದಳ, ಪ್ರಿವಿಲೆಜ್ಡ್‌ಬಾಣೆ, ಅನ್ ಪ್ರಿವಿಲೆಜ್ಡ್ ಬಾಣೆ, ಜಮ್ಮಾ, ಜಮ್ಮಾ ಬಾಣೆ, ಜಹಗೀರ್, ಜಹಗೀರ್ ಬಾಣೆ, ಉಂಬಳಿ, ಉಂಬಳಿ ಬಾಣೆ, ಬಟ್ಟಮಾನ್ಯ, ಸರ್ವಮಾನ್ಯ, ಜೋಡಿ, ಮಟ್ಟ ಉತ್ತರ, ಒಂಟಿ ಹೊಲ, ಹೊಲ ಅಥವಾ ಸರಿಗೆ, ಬಾರಿಕೆ, ಸಾಗು, ಬಿಡುಕಳ, ಮನೆ ದಳ, ಗೌಡುಂಬಳಿ, ನೈಮಣ್ಣು, ಏಲಿಯನೇಟೆಡ್ ಬಾಣೆ, ಏಲಿಯನೇಟೆಡ್ ಹಿತ್ಲುಮನೆ ದಳ, ರಿಡೀಮ್ಡ್, ಅನ್ ರಿಡೀಮ್ಡ್, ಹುಲ್ಲುಗಾವಲು, ಜಮ್ಮಾ ಮಲೆ, ಭೋಗ್ಯಕ್ಕೆ ತೆಗೆದುಕೊಂಡ ಏಲಕ್ಕಿ ಮಲೆ, ಏಲಕ್ಕಿ ಸಾಗು, ಕುರವು, ಗೆರೆಕಾಡು, ಊರುಗುಪ್ಪಾ, ಊರುಡುವೆ, ಪೈಸಾರಿ, ಊರುಂಬಾಳ ಮತ್ತು ಮಡು ಹಾಗೂ ದೇವರಕಾಡು".

೧೯೯೪ರ ಜೂನ್ ೨೯ರಂದು ಅಂದಿನ ಕೊಡಗು ಜಿಲ್ಲಾಧಿಕಾರಿಯವರು ರಾಜ್ಯ ಸರಕಾರಕ್ಕೆ ಪತ್ರ ಬರೆದು, ಭೂ ಹಕ್ಕಿನ ಮತ್ತು ಹಿಡುವಳಿ ಕುರಿತು ಕುಟುಂಬದವರಲ್ಲೇ ವಿವಾದವಿರುವುದು ಕೊಡಗಿನಲ್ಲಿ ಸಾಮಾನ್ಯವಾಗಿದೆ. ಆದುದರಿಂದ ಸರ್ವೆ ನಡೆಸದೇ ಪ್ರತಿ ಭೂ ಹಿಡುವಳಿಯ ವಿವಾದ ಪರಿಹರಿಸಲು ಸಾಧ್ಯವಿಲ್ಲ. ಭೂ ಹಕ್ಕಿನ ವಿವಾದಗಳೂ ಸಾಕಷ್ಟಿದೆ. ಕೊಡಗಿನಲ್ಲಿ ವಿಶೇಷ ಭೂ ಹಿಡುವಳಿದಾರರಿಗೆ ಒಡೆತನದ ಹಕ್ಕು ನೀಡಬಹುದೆಂದು ಸರಕಾರಕ್ಕೆ ಶಿಫಾರಸ್ಸು ಮಾಡಿದ್ದರು.

೧೯೯೯ರ ಸೆಪ್ಟೆಂಬರ್ ೨೨ರಂದು ರಾಜ್ಯ ಸರಕಾರವು ಕೊಡಗು ಜಿಲ್ಲಾಧಿಕಾರಿ ಅವರಿಗೆ ಪತ್ರ ಬರೆದು, ಎಲ್ಲ ಶಿಫಾರಸುಗಳನ್ನೂ ಪರಿಶೀಲಿಸಲಾಗಿದೆ. ಹೈಕೋರ್ಟ್ ಆದೇಶವು ಒಂದು ನಿಗದಿತ ಭೂ ಗುತ್ತಿಗೆಗೆ ಸಂಬಂಧಿಸಿದ್ದಾಗಿದೆ. ಕರ್ನಾಟಕ ಭೂ ಕಂದಾಯ ಕಾಯ್ದೆ ಸೆಕ್ಷನ್ ೭೯(೨)ರ ಪ್ರಕಾರ ಉಳಿದೆಲ್ಲ ವಿಶೇಷ ಭೂಮಿಗಳು ಒಂದೇ ರೀತಿ ಇವೆ. ಕೃಷಿಯಲ್ಲಿರುವ ಎಲ್ಲ ಸಾಗುವಳಿಯ ಬಾಣೆ ಮತ್ತು ಹಿತ್ಲುಗಳ ಭೂಮಿಯ ಮೌಲ್ಯವನ್ನು ಗೊತ್ತುಮಾಡಿ ಒಡೆತನದ ಹಕ್ಕನ್ನು ಕೊಡಗಿನಲ್ಲಿ ನೀಡಬಹುದು ಎಂದು ತಿಳಿಸಿತ್ತು.

ಹೈಕೋರ್ಟ್ ಆದೇಶದಂತೆ ಸಾಗುವಳಿಯಾಗದ ಹಾಗೂ ಮೌಲ್ಯ ನಿಗದಿಯಾಗದ ಬಾಣೆ ಮತ್ತು ಹಿತ್ಲು ಭೂ ಹಿಡುವಳಿದಾರರು ಭೂಮಿಯನ್ನು ಹೊಂದಬಹುದು ಹಾಗೂ ಕೆಲವು ರಿಯಾಯಿತಿಗಳನ್ನು ಪಡೆಯಬಹುದು.

ಚಕ್ಕೇರ ಪೂವಯ್ಯ ಅವರು ಕರ್ನಾಟಕ ಸರಕಾರದ ವಿರುದ್ಧ ರಿಟ್ ಅರ್ಜಿ (೩೯೩೯/೧೯೮೮)ಯನ್ನು ಸಲ್ಲಿಸಿದ್ದರು. ಪ್ರಸಿದ್ಧ ವಕೀಲ ಎ. ಕೆ. ಸುಬ್ಬಯ್ಯನವರು ಅರ್ಜಿದಾರರ ವಕಾಲತ್ತು ವಹಿಸಿದ್ದರು. ಪೂವಯ್ಯ ಅವರಿಗೆ ಜಿಲ್ಲೆಯ ಅಧಿಕಾರಿಗಳು "ಏಲಿಯನೇಟೆಡ್ ಬಾಣೆಯ ಭೂಮಿ"ಯ 'ಖಾತಾ' ನೀಡಲು ನಿರಾಕರಿಸಿದ್ದರಿಂದ ಪೂವಯ್ಯನವರು ನ್ಯಾಯಾಲಯದ ಮೊರೆ ಹೋಗಬೇಕಾಯಿತು. ಹೈಕೋರ್ಟ್ ಮಹತ್ವದ ತೀರ್ಪನ್ನು ಪೂವಯ್ಯ ಪರ ನೀಡಿತ್ತು.

"ಊರುಡುವೆ", "ದೇವರಕಾಡು", "ಊರುಂಬಾಳ", "ಊರುಮಡು"ವಿನ ಅಡಿಯಲ್ಲಿ ಅತಿಕ್ರಮಿಸಿಕೊಳ್ಳಲಾಗಿರುವ ಸಾರ್ವಜನಿಕ ಉದ್ದೇಶದ ಭೂಮಿಯನ್ನು ವಶಪಡಿಸಿಕೊಂಡು ಅರಣ್ಯ ಇಲಾಖೆಗೆ ನೀಡಬೇಕೆಂದು ಸರಕಾರ ಆದೇಶಿಸಿತ್ತು. ಆದರೆ ಗ್ರಾಮಸ್ಥರಿಗೆ ನೀಡಲಾಗಿರುವ ಕೆಲವು ವಿಶೇಷ ಸವಲತ್ತುಗಳು ಮುಂದುವರೆಯುತ್ತವೆ ಎಂದು ಅದು ಹೇಳಿತು.

ಈ ಎಲ್ಲ ವಿಷಯಗಳನ್ನು ೧೯೯೯ರ ಮಾ. ೯ರಂದು ಮಡಿಕೇರಿ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಅಂದಿನ ಕಂದಾಯ ಇಲಾಖಾ ಕಾರ್ಯದರ್ಶಿ ಜಿ. ಕೆ. ಲೋಕರೆ ಅವರ ಸಮ್ಮುಖದಲ್ಲಿ ಚರ್ಚಿಸಲಾಗಿತ್ತು. ಚರ್ಚಿತ ವಿಷಯಗಳ ಮಾಹಿತಿಯನ್ನು ಅಂದಿನ ಜಿಲ್ಲಾಧಿಕಾರಿ ಜಯರಾಮರಾಜೇ ಅರಸ್ ಸರಕಾರಕ್ಕೆ ರವಾನಿಸಿದ್ದರು.

### ೯ ಲಕ್ಷ ರೂ. ಬಿಡುಗಡೆ

"ಭೂ ದಾಖಲೆಗಳನ್ನು ಗಣಕೀಕರಣಗೊಳಿಸಲು ಸರಕಾರವು ಕೊಡಗಿಗೆ ೯ ಲಕ್ಷ ರೂ.ಗಳನ್ನು ಮಂಜೂರು ಮಾಡಿತ್ತು. 'ಡೇಟಾ ಎಂಟ್ರಿ' ಕೆಲಸವನ್ನು ಖಾಸಗಿ ಸಂಸ್ಥೆಗೆ ವಹಿಸಲಾಗಿತ್ತು. ಜಮಾಬಂದಿಯ ಬದಲು ಪಹಣಿ ಅಥವಾ ಆರ್‌ಟಿಸಿ ಜಾರಿಗೆ ಬರುವುದು. ಆದರೆ ಹೈಕೋರ್ಟ್ ಜಮಾಬಂದಿಗೆ ಮನ್ನಣೆ ನೀಡಲು ನಿರಾಕರಿಸಿತ್ತು. ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಪಹಣಿ ಪದ್ಧತಿ ಇರುವಾಗ ಕೊಡಗಿಗೆ ಮಾತ್ರ ಜಮಾಬಂದಿಯನ್ನು ಏಕೆ ಮುಂದುವರೆಸಬೇಕೆಂದು ಪ್ರಶ್ನಿಸಿತ್ತು.".

ಹೀಗೆ ನಾನಾ ವಿಧದ ಭೂ ಹಿಡುವಳಿ ಪದ್ಧತಿಗಳನ್ನು ರದ್ದು ಮಾಡಿರುವುದರಿಂದ ವಿಶೇಷವಾಗಿ ಜಮ್ಮಾ ಭೂಮಿಯನ್ನು ಪರಭಾರೆ ಮಾಡಲು ಅನುಕೂಲ ಮಾಡಿಕೊಟ್ಟಂತಾಗಿದೆ. ಇದು ಭೂ ಹಿಡುವಳಿದಾರ ತನ್ನ ಆಸ್ತಿಯನ್ನು ನೋಂದಣಿ ಮಾಡಿ ಕೊಂಡು, ಬ್ಯಾಂಕ್ ಮತ್ತಿತರ ಸಂಸ್ಥೆಗಳಿಂದ ಸಾಲ ಪಡೆಯಲು

19ನೇ ಪುಟಕ್ಕೆ

# ಗೃಹ ಸಂಗಾತಿ : ವಾಯ್ನ್ (Wines)

**ಒಣದ್ರಾಕ್ಷೆಯ ಟಾನಿಕ್ ವಾಯ್ನ್ (ದ್ರಾಕ್ಷಾರಸ) :**

**ಬೇಕಾಗುವ ಸಾಮಾನು :** 1 ಕಿ. ಗ್ರಾಂ ಕಪ್ಪು ಒಣ ದ್ರಾಕ್ಷೆ, 1½ ಕಿ. ಗ್ರಾಂ ಸಕ್ಕರೆ, ½ ಕಿ. ಗ್ರಾಂ ಗೋಧಿ, 3 ಊ. ಚ. ಖಮೀರ್ ಅಥವಾ ಸ್ವಲ್ಪ ಯೀಸ್ಟ್, ಕಾದಾರಿದ 6 ಬಾಟಲಿ ನೀರು.

**ವಿಧಾನ :** ಮೇಲೆ ಹೇಳಿರುವ ಎಲ್ಲಾ ಜೀನಸುಗಳನ್ನು ಕಲಕಿ ಮಿಶ್ರ ಮಾಡಿ. 21 ದಿವಸಗಳ ಕಾಲ ಜಾಡಿಯೊಳಗೆ ಹಾಕಿ ಮುಚ್ಚಿಟ್ಟುಕೊಳ್ಳಿ. ದಿನಕ್ಕೊಂದಾವರ್ತಿಯಂತೆ ಅದರೊಳಗೆ ಕೈ ಹಾಕಿ ಕಲಕಿಸಿ. 22ನೇ ದಿವಸ ಬಟ್ಟೆಯ ಮೂಲಕ ಗಾಳಿಸಿ ಬಾಟಲಿಯೊಳಗೆ ಹಾಕಿಟ್ಟುಕೊಳ್ಳಿ.

**ದ್ರಾಕ್ಷೆಹಣ್ಣಿನ ವಾಯ್ನ್ :**

**ಬೇಕಾಗುವ ಸಾಮಾನು :** 1 ಕಿ. ಗ್ರಾಂ. ಕಪ್ಪು ಜಾತಿಯ ದ್ರಾಕ್ಷೆ ಹಣ್ಣು, 2 ಮೊಟ್ಟೆಯ ಬಿಳಿ ಲೋಳೆ (ಚೆನ್ನಾಗಿ ಹೊಡೆದು), 1 ಕಿ. ಗ್ರಾಂ. ಸಕ್ಕರೆ, 50 ಗ್ರಾಂ ಯಿಸ್ಟ್ ಅಥವಾ 3 ಊ. ಚ. ಖಮೀರ್, ಕಾದಾರಿದ 5ಲೀ ನೀರು, 100 ಗ್ರಾಂ ಗೋಧಿ.

**ವಿಧಾನ :** ಮೇಲೆ ಹೇಳಿರುವ ಎಲ್ಲಾ ಜೀನಸುಗಳನ್ನು ಬೆರಸಿ ಕಲಕಿ ಮಿಶ್ರಮಾಡಿ. 21 ದಿವಸಗಳ ಕಾಲ ಜಾಡಿಯೊಳಗೆ ಹಾಕಿ ಮುಚ್ಚಿಟ್ಟುಕೊಳ್ಳಿ. ದಿನಕ್ಕೊಂದಾವರ್ತಿಯಂತೆ ಅದರೊಳಗೆ ಕೈ ಹಾಕಿ ಕಲಕಿಸಿ. 22ನೇ ದಿವಸ ಬಟ್ಟೆಯ ಮೂಲಕ ಗಾಳಿಸಿ ಬಾಟಲಿಯೊಳಗೆ ಹಾಕಿಟ್ಟುಕೊಳ್ಳಿ. ಹಾಗೆಯೇ ಬಿಳಿ (ಹಸಿರು) ಜಾತಿಯ ದ್ರಾಕ್ಷೆ ಹಣ್ಣಿನ "ವಾಯ್ನ್" ಇದೇ ತರ ತಯಾರಿಸಬಹುದು.

**ನೆಲ್ಲಿಕಾಯಿಯ ವಾಯ್ನ್ :**

**ಬೇಕಾಗುವ ಸಾಮಾನು :** 2 ಕಿ. ಗ್ರಾಂ ಚೆನ್ನಾಗಿ ಬಲಿತು ಹಣ್ಣಾದ ನೆಲ್ಲಿಕಾಯಿಯ ಹಣ್ಣು (ಜಜ್ಜಿ), 3 ಕಿ. ಗ್ರಾಂ. ಸಕ್ಕರೆ, ½ ಕಿ. ಗ್ರಾಂ. (ಕಪ್ಪು) ಒಣ ದ್ರಾಕ್ಷೆ, ½ ಟಿ. ಚ. ದಾಲ್ಚಿನ್ನಿಯ ಪುಡಿ, 1 ಟೀ. ಚ. ಜಾಯಿಪತ್ರಿಯ ಪುಡಿ, ಕಾದಾರಿದ 8 ಕಪ್ ನೀರು.

**ವಿಧಾನ :** ನೆಲ್ಲಿಕಾಯಿಗಳನ್ನು ಕುಟ್ಟಿ ಜಜ್ಜಿ ಬೀಜ ತೆಗೆದು, ಸ್ವಲ್ಪ ನೀರಿನಲ್ಲಿ ಹಾಕಿ ಕುದಿಸಿ ತೆಗೆದು ಬಿಸಿಯಾಗಿಸಿ ಮೇಲೆ ಹೇಳಿರುವ ಇತರ ಎಲ್ಲಾ ಜೀನಸುಗಳೊಡನೆ ಬೆರಸಿ ಹಲವು ಬಾರಿ ಕಲಕಿಸಿ ಮೇಲೆ ಹೇಳಿದ ಪ್ರಕಾರ ವಾಯ್ನ್ ತಯಾರಿಸುವುದು.

**ಬೀಟ್‌ರೂಟ್‌ನ ವಾಯ್ನ್ (ರಸಮದ್ಯ) :**

**ಬೇಕಾಗುವ ಸಾಮಾನು :** 2½ ಕಿ. ಗ್ರಾಂ. ಬೀಟ್‌ರೂಟ್, 2 ಕಿ. ಗ್ರಾಂ. ಸಕ್ಕರೆ, 5 ನಿಂಬೆಹಣ್ಣು, 6 ಕಿತ್ತಳೆ ಹಣ್ಣು, 2 ಊ. ಚ. ಖಮೀರ್‌ಇಲ್ಲವೆ ಸ್ವಲ್ಪ ಯೀಸ್ಟ್, 6 ಬಾಟಲಿ (ಬೇಯಿಸಿ ಕುದಿಸಿದ) ನೀರು.

**ವಿಧಾನ :** ಬೀಟ್‌ರೂಟ್‌ನ ಸಿಪ್ಪೆಯನ್ನು ಕೆರೆದು ತೆಗೆದು ನುಣ್ಣಗೆ ಕೊಚ್ಚಿ ಅದನ್ನು 6 ಬಾಟಲಿ ನೀರಿನಲ್ಲಿ ಹಾಕಿ ಕರಗಿಸಿ, 3 ತಾಸು ಕಾಲ ಸೌಮ್ಯವಾದ ಉರಿಯ ಮೇಲೆ ಬೆಯಿಸಿ ಕೆಳಗಿಳಿಸಿ. ಬಿಸಿಯಾರಿದ ನಂತರ ಅದನ್ನು ಬಟ್ಟೆಯ ಮೂಲಕ ಗಾಳಿಸಿ ಜಾಡಿಯೊಳಗೆ ಹೊಯ್ಯಿರಿ. ನಿಂಬೆರಸ ಮತ್ತು ಕಿತ್ತಳೆ ಹಣ್ಣಿನ ರಸವನ್ನು ಗಾಳಿಸಿ ಅದಕ್ಕೆ ಸೇರಿಸಿ. ಆಮೇಲೆ ಸಕ್ಕರೆ ಮತ್ತು ಖಮೀರ್ ಅಥವಾ ಯೀಸ್ಟ್ ಹಾಕಿ ಚೆನ್ನಾಗಿ ಕಲಕಿಸಿ ಮುಚ್ಚಿಟ್ಟುಕೊಳ್ಳಿ. ದಿನಕ್ಕೊಂದಾವರ್ತಿಯಂತೆ 21 ದಿವಸಗಳವರೆಗೆ ದಿನಾಲೂ ಕೈ ಹಾಕಿ ಕಲಕಿಸಬೇಕು. 22ನೇ ದಿವಸ ಅದನ್ನು ಗಾಳಿಸಿ ಬಾಟಲಿಯಲ್ಲಿ ಹಾಕಿಟ್ಟುಕೊಳ್ಳಿ. ಇದರಲ್ಲಿ ಸಾಧಾರಣ 7 ಬಾಟ್ಲೆ ವಾಯ್ನ್ ಸಿಗಬೇಕು. ಕಡಿಮೆಯಾದರೆ ಬೀಟ್‌ರೂಟಿನ (ಉಳಿದಿರುವ) ಮಡ್ಡಿಗೆ ಸ್ವಲ್ಪ ನೀರು ಸೇರಿಸಿ ಪುನಃ ಬೇಯಿಸಿ 7 ಬಾಟಲಿಗೆ ಬರುವಷ್ಟು ಭರ್ತಿ ಮಾಡಿ. ವಾಯ್ನ್ ರಸದ ಬಣ್ಣವು ತಕ್ಕ ಕೆಂಪು ಬಣ್ಣಕ್ಕೆ ಬಾರದಿದ್ದಲ್ಲಿ, ಕಾವಲಿ ಅಥವಾ ಬಾಣಲೆಯಲ್ಲಿ ಸಕ್ಕರೆ ಸುಟ್ಟು ಅದನ್ನು ಸ್ವಲ್ಪ ನೀರಿನಲ್ಲಿ ಕರಗಿಸಿ, ವಾಯ್ನ್ ರಸದ ಬಣ್ಣ ಸರಿಯಾಗುವಂತೆ ಅದಕ್ಕೆ ಸೇರಿಸಿ ಕಲಕಿಸಿ ಬಾಟಲಿಯಲ್ಲಿ ತುಂಬಿಸಿ.

---

## ಕುಯ್ಯಂಗೇರಿ ಮಹಿಳಾ ವೃಂದದವರಿಂದ ಪಾಲೂರಪ್ಪನ ಸನ್ನಿಧಿಯಲ್ಲಿ ಸುಗ್ಗಿ ಸುಪ್ವಾಲೆ ನೃತ್ಯ

ದಿನಾಂಕ 18-4-2000 ಮಂಗಳವಾರದಂದು ಪಾಲೂರು ಮಹಾಲಿಂಗೇಶ್ವರ ದೇವಸ್ಥಾನದ ವಾರ್ಷಿಕೋತ್ಸವದ ದಿನದಂದು 11ಗಂಟೆಗೆ ಸ್ವಾಮಿಯ ಮಹಾ ಪೂಜೆಯು 12 ಗಂಟೆಗೆ ಎತ್ತು ಹೆರಾಟ ಉಮ್ಮತ್ತಾಟ ಪಾಲೂರು ಮಹಿಳಾ ತಂಡದಿಂದ ಹಾಗೂ ಅಮ್ಮಾಜೀರ ಪೊನ್ನಪ್ಪನವರ "ಪೊನಿಧ್ವನಿ" ವಿರಚಿತ "ಸುಗ್ಗಿ ಸುಪ್ವಾಲೆ" ಕೋಲಾಟ ಕುಣಿತವನ್ನು ಕುಯ್ಯಂಗೇರಿ ಕಾವೇರಿ ಮಹಿಳಾ ಸಮಾಜದ ಹೆಣ್ಣು ಮಕ್ಕಳಿಂದ ಸಾಂಪ್ರದಾಯಿಕ ಉಡುಗೆ ತೊಟ್ಟು, ಕುಮಾರಿ ಕಡ್ಲೇರ ಸುಮಾ ಮಂದಪ್ಪ, ಕಡ್ಲೇರ ಸಖಿ ಪೂವಯ್ಯ, ಪೋರ್ಕ್ಯಯನ ಅನು ಸುರೇಶ, ಪೋರ್ಕ್ಯಯನ ಬಬಿತ ರಾಮಕೃಷ್ಣ, ಪೋರ್ಕ್ಯಯನ ಗೀತ ರಾಮಕೃಷ್ಣ, ತಂಬಂಡ ಜಾನಕಿ ಗಣೇಶ, ತಂಬಂಡ ಜಾನಕಿ ಮಹೇಶ, ಮುಕ್ಕಾಟೀರ ಸುಮಿ ಮಿಟ್ಟು, ತಡಿಯಪ್ಪನ ಧರಣಿ ಬಿದ್ದಪ್ಪ, ಕುಂಜಿಲನ ಮೀನಾಕ್ಷಿ ಬೆಳ್ಯಪ್ಪರವರುಗಳು ಹಾಡಿ ಪಾಡಿ ಕುಣಿದ ಕುಣಿತವು ಅಂದಿನ ಪಾಲೂರು ಹಬ್ಬಕ್ಕೆ ಜನರ ಚಪ್ಪಾಳೆಯೊಂದಿಗೆ ಮೆರುಗು ತಂದಿತ್ತು. 2 ಗಂಟೆಗೆ ಅನ್ನ ಸಂತರ್ಪಣೆ. ಮಹಾಲಿಂಗೇಶ್ವರ ಮತ್ತು ಪಾರ್ವತಿಯಮ್ಮನವರ ಜೋಡಿ ತಡಂಬುವನ್ನು ಹೊತ್ತು ನೃತ್ಯ ಪ್ರದಕ್ಷಿಣೆಯನ್ನು ಕೇರಳದ ಚಂಡೆ ಮದ್ದಲೆಯು ಸಹಸ್ರಾರು ಭಕ್ತಾದಿಗಳ ಮನಸ್ಸನ್ನು ತನ್ಮಯಗೊಳಿಸಿತು.

**ವರದಿ : ಚೀಕನ ನಾಗೇಶ್ ತಮ್ಮಣ್ಣ, ಪಾಲೂರು.**

---

**18ನೇ ಪುಟದಿಂದ**

ಅವಕಾಶ ಕಲ್ಪಿಸಿದೆ. ಇದರ ಜೊತೆಗೆ, ಕೊಡಗಿನಲ್ಲಿ ಮಾತ್ರ ಜಾರಿಯಲ್ಲಿದ್ದ ಕ್ಲಿಷ್ಟ ಭೂ ಹಿಡುವಳಿ ಪದ್ಧತಿ ಕಂದಾಯ ಅಧಿಕಾರಿಗಳಿಗೂ ತಲೆ ನೋವಿನ ವಿಷಯವಾಗಿತ್ತು.

ತನ್ಮಧ್ಯೆ ನಿರ್ಬಂಧಗಳನ್ನು ನಿವಾರಿಸಿರುವುದರಿಂದ ಕುಟುಂಬದ ಸದಸ್ಯರ ಹಿತವನ್ನು ಬಲಿಕೊಟ್ಟು ಆಸ್ತಿಗಳನ್ನು "ಹೊರಗಿನವರಿಗೆ" ಮಾಡುವ ಭಯವೂ ಈಗ ತಲೆದೋರಿದೆ

**ಕೃಪೆ : ಮೈಸೂರು ಮಿತ್ರ**

---

ತನ್ನ ಸುಂದರತೆಯೇ ಕೆಲವೊಮ್ಮೆ ತನಗೇನೆ ಮಾರಕವಾಗಬಹುದು

## ನಮ್ಮವಕ ಲಗ್ನಕಾರ್ಯಗ

1. ಸುಂಠಿಕೊಪ್ಪ ನಿವಾಸಿ ಸಬ್ಬಂಡ್ರ ಕುಶಾಲಪ್ಪನವ್ರ ಮಗ್ಳು ಶೈಲಜಾಂಗೂ ಮತ್ತೆ ಸದ್ರಿ ನಿವಾಸಿ ಎ. ಆರ್. ಅಚ್ಚಮ್ಮಯ್ಯನವ್ರ ಮಂಜ ಎ. ಎ. ಮನುವಿಗೂ ತಾರೀಖ್ 17-4-2000ರ್ಲಿ ಮಡಿಕೇರಿಯ ಕೆಳಗ್ಗೆನ ಗೌಡ ಸಮಾಜಲಿ ಮದ್ವೆ ಕಳ್ತ್.

2. ಚೆನ್ನಂಗಿ ಅಬ್ಬೂರು ಕಟ್ಟೆ ನಿವಾಸಿ ಕಾಚಿಲಂಡ ಪೂವಯ್ಯನವ್ರ ಮಂಜ ಪ್ರಭುವಿಗೂ ಮತ್ತೆ ಮಡಿಕೇರಿ ಪುಟಾಣಿನಗರದ ನಿವಾಸಿ ಬಾಕಿಲನ ಬಾಬುರವರ ಮಗ್ಳು ಕವಿತಳಿಗೂ ಮಡಿಕೇರಿಯ ಕೆಳಗಿನ ಗೌಡ ಸಮಾಜಲಿ ತಾರೀಖ್ 16-4-2000ರ್ಲಿ ಮದ್ವೆ ಕಳ್ತ್.

3. ಕಟ್ಟೆ ಮಾಡ್ ಗ್ರಾಮದ ಅಪ್ಪೆಯಂಡ್ರ ದಿ. ಆನಂದನವ್ರ ಮಂಜ ಮಣಿ ಮುತ್ತಪ್ಪಂಗೂ ಮತ್ತೆ ನೆಲ್ಲಿ ಹುದಿಕೇರಿ ಗ್ರಾಮದ ಮುಟ್ಲುಮನೆ ಲಕ್ಷ್ಮಣನವ್ರ ಮಗ್ಳು ಲಲಿತಾಳಿಗೂ ಸಿದ್ದಾಪುರದ ಸ್ವರ್ಣ ಮಾಲಾ ಕಲ್ಯಾಣ ಮಂಟಪಲಿ ತಾರೀಖ್ 19-4-2000ರ್ಲಿ ಮದ್ವೆ ನಡ್ತ್.

4. ಅಚ್ಚಾಂಡಿರ ಲೇಟ್ ಕೆಂಚಪ್ಪನವ್ರ ಮಗ್ಳು ನವೀನ ಕುಮಾರಿ (ಎಡಿಸ್‌ನಲ್, ಸಿವಿಲ್ ಜಡ್ಜ್ ಮತ್ತು ಐ.ಎಂ.ಎಫ್.ಇ. ನಂಜನಗೂಡು) ಇವ್ರ ಮದ್ವೆ ಮೈಸೂರ್ ವಿ. ವಿ. ಮೊಹಲ್ಲಾ ನಿವಾಸಿ ದಿ॥ ಎಂ. ಎಸ್. ಕೃಷ್ಣಯ್ಯನವ್ರ ಮಂಜ ನರೇಂದ್ರ ಬಾಬುವಿಗೂ ಮೈಸೂರಿನ ಗೋವಿಂದರಾವ್ ಮೆಮೋರಿಯಲ್ ಹಾಲ್‌ಲಿ ತಾರೀಖ್ 20-4-2000ರ್ಲಿ ಮದ್ವೆ ಬಾರಿ ವಿಜೃಂಭಣೆಲಿ ಕಳ್ತ್.

5. ಹೆರವನಾಡ್ ಗ್ರಾಮದ ಕಡ್ಯದ ಸೋಮಣ್ಣನವ್ರ ಮಗ್ಳು ಮಮತಂಗೂ ಮುತ್ತಾರ್ಮುಡಿ ಗ್ರಾಮದ ಬಿಳಿಯಾರ್ ದಿ. ಮುತ್ತಣ್ಣನವ್ರ ಮಂಜ ತಿಮ್ಮಯ್ಯಂಗೂ ತಾರೀಖ್ 20-4-2000ರ್ಲಿ ಮಡಿಕೇರಿಯ ಕೆಳಗಿನ ಗೌಡ ಸಮಾಜಲಿ ಮದ್ವೆ ಕಳ್ತ್.

6. ನಂಜರಾಯ ಪಟ್ಟಣ ಗ್ರಾಮದ ದೇವಜನ ಚಿಣ್ಣಪ್ಪನವ್ರ ಮಂಜ ಮನೋಹರಂಗೂ ಬಿಳಿಗೇರಿ ಗ್ರಾಮದ ಪರ್ನಕೋಟಿ ಕೃಷ್ಣಪ್ಪನವರ ಮಗ್ಳು ಮಮತಂಗೂ ತಾರೀಖ್ 21-4-2000ರ್ಲಿ ಕುಶಾಲನಗರ ಗೌಡ ಸಮಾಜಲಿ ಮದ್ವೆ ಕಳ್ತ್

7. ಮರಗೋಡು ನಿವಾಸಿ ಮಾಳಿಗೆ ಮನೆ ಕೃಷ್ಣಪ್ಪನವ್ರ ಮಂಜ ಜನಾರ್ಧನಂಗೂ ಸಣ್ಣಪುಲಿಕೋಟು ಗ್ರಾಮದ ಕುಯ್ಯಮುಡಿ ಚಂಗಪ್ಪನವ್ರ ಮಗ್ಳು ಕಮಲಾಕ್ಷಿಗೂ ತಾರೀಖ್ 22-4-2000ರ್ಲಿ ಮರಗೋಡು ಗೌಡ ಸಮಾಜಲಿ ಮದ್ವೆ ನಡ್ತ್.

8. ಮದೆ ಗ್ರಾಮದ ಪಟ್ಟಡ ಲೋಭಯ್ಯನವ್ರ ಮಗ್ಳು ಶಶಿಕಲಾಂಗೂ ಮತ್ತೆ ವೀರಾಜಪೇಟೆ ಆರ್ಜಿಗ್ರಾಮದ ಚೆಟ್ಟಿನೆರವನ ಪೊನ್ನಪ್ಪನವ್ರ ಮಂಜ ಚಂದ್ರಶೇಖರಂಗೂ ತಾರೀಖ್ 26-4-2000ರ್ಲಿ ಮಡಿಕೇರಿ ಗಣೇಶ್ ಕಲ್ಯಾಣ ಮಂಟಪಲಿ ಮದ್ವೆ ನಡ್ತ್.

9. ಮೈಸೂರು ನಿವಾಸಿ ಬೈಮನ ದೇವಯ್ಯನವ್ರ ಮಗ್ಳು ಕಾವ್ಯಳಿಗೂ ಮತ್ತೆ ಬೆಂಗಳೂರು ನಿವಾಸಿ ಶ್ರೀಮತಿ ಶಾಂತನವ್ರ ಮಂಜ ಮದುಸೂದನಂಗೂ ಬೆಂಗಳೂರಿನ ನಾಗದೇವಕಿ ಪ್ಯಾಲೇಸ್ ಮಂಟಪಲಿ ತಾರೀಖ್ 26-4-2000 ರ್ಲಿ ಮದ್ವೆ ಕಳ್ತ್.

10. ನವಿಲೂರು ಗ್ರಾಮದ ಪಳಂಗೋಟು ದಿ. ಮಾಚಯ್ಯನವ್ರ ಮಗ್ಳು ಶಾರದಳಿಗೂ ಹೆರವನಾಡು ಗ್ರಾಮದ ಬೆಪ್ಪುರನ ದಿ. ಮುದ್ದಪ್ಪನವ್ರ ಮಂಜ ಬೋಪಯ್ಯಂಗೂ ತಾರೀಖ್ 28-4-2000ರ್ಲಿ ಕುಶಾಲನಗರ ಗೌಡ ಸಮಾಜಲಿ ಮದ್ವೆ ಕಳ್ತ್.

13ನೇ ಪುಟದಿಂದ

ರೇವತಿಗೆ ಕಪಾಳಕ್ಕೆ ಹೊಡೆದಂತಾಯಿತು. ಅವಳ ಮುಖ ನಾಚಿಕೆ, ಅವಮಾನದಿಂದ ಕೆಂಪೇರಿತು.

ಇದನ್ನು ಗಮನಿಸಿದ ಪ್ರಸನ್ನ ಅಲ್ಲಿಂದ ಹೊರಡುತ್ತಾ ತುಂಬಾ ಮೆಲ್ಲಗೆ "ಐಯಾಮ್ ಸಾರಿ" ಎಂದನು.

ಪ್ರಸನ್ನ ಹಾಲ್‌ಗೆ ಬಂದನು.

ಆಗ ಬೆಳಗಿನ ಹತ್ತು ಗಂಟೆ !

ಫೋನ್ ರಿಂಗ್ ಆಯಿತು.

ಪ್ರಸನ್ನ ರಿಸೀವರ್ ಎತ್ತಿ ಮಾತಾಡುತ್ತಿರುವಂತೆಯೇ ಅವನ ಮುಖ ಭಯ, ಗಾಬರಿಯಿಂದ ಬಿಳುಚಿಕೊಂಡಿತು.

"ನೀವು ಹೇಳ್ತಾ ಇರೋದು ನಿಜವೆ?!

"ಹೌದು ಈಗಲೇ ಬರ್‍ತೀರ?"

"ಹಾಂ..... ಹಾಂ...... ಹೊರಡುತ್ತಿದ್ದೇನೆ ಎಂದು ಫೋನ್ ಡಿಸ್ ಕನೆಕ್ಟ್ ಮಾಡಿ ಹೊರ ಬಂದನು.

ರೇವತಿಯನ್ನು ಕರೆತರಲು ಕೆಲಸದ ಆಳುಗಳಿಗೆ ಹೇಳಿ ತಾನು ಜೀಪ್‌ನಲ್ಲಿ ಹೊರಟನು !

ಮತ್ತೊಂದು ನಿಗೂಢ ರೀತಿಯ ಘಟನೆ ನಡೆದು ಹೋಗಿತ್ತು !

ಭಯಾನಕ ವಿಚಿತ್ರ ಪ್ರಸಂಗ !

ಪ್ರಸನ್ನ ರೇವತಿಯೊಂದಿಗೆ ಊರಿನ ಜನಗಳು ಸಹ ಅಲ್ಲಿಗೆ ಹೋಗುತ್ತಿದ್ದಾರೆ !

ಹುತ್ತ..... ಹುತ್ತದ ಹತ್ತಿರ !?

**(ಮುಂದುವರೆಯುತ್ತದೆ)**

### ಗೆಳತಿ

ನನ್ನದೆಯ ಈ ಪ್ರೇಮ ಕಾವ್ಯಕ್ಕೆ ಪಲ್ಲವಿಯಾಗುವೆಯಾ?
ಮುಂಜಾನೆಯ ಮಂಜಲಿ ಅಂಗಳದ ಅಂಚಿನಲ್ಲಿ ಅರಳಿ ನಿಂತ
ಜಪಾಸುಮದ ಕೇಸರಿ ಪ್ರತ್ಯೋಶವ ಹಿಮ ಬಿಂದು ಒಂದು
ಸೂರ್ಯೋದಯದ ಸಡಗರವನ್ನು ಪ್ರತಿ ಫಲಿಸಿದರೆ ಅದೇ ಒಂದು
ಕವಿತೆಯಾಗುತ್ತದೆ.
ಮೋಡಗುಡ್ಡದ ಮೇಲೆ ದೇವಾಲಯದ ಪ್ರಾರಂಗಣದಲ್ಲಿ
ಕಂಬಿಕ್ಕೊರಗಿ ಅದೇ ತಾನೇ ಬಾಲವಸ್ಥೆಯಿಂದ ಯೌವ್ವನಕ್ಕೆ
ಪ್ರವೇಶ ಮಾಡುವ ಅಪೂರ್ವ ಬಾಲೆ ಮೊಣಕಾಲು ಸುತ್ತ
ಕೈ ಬಳಸಿ ತನ್ನಲ್ಲೆ ತಾನೇ ತುಟಿಯಂಚಿನಲ್ಲಿ ಮುಗುಳು
ನಗೆ ಚೆಲ್ಲಿದರೆ. ಅದೇ ನನಗೆ ನಿನ್ನ ನೆನಪಾಗುತ್ತದೆ.
ಹೇಳು, ನನ್ನದೇ ಈ ಪ್ರೀತಿಗೆ ಸ್ಪಂದಿಸುವೆಯಾ
ಸ್ಪಂದಿಸ ಬಲ್ಲೆಯೆಂಬ ವಿಶ್ವಾಸ ನನಗಿದೆ.
ಉಳಿದದ್ದು ನಿನಗೆ ಸೇರಿದ್ದು, ಇದರ ಬಗ್ಗೆ
ಮಾತಾಡಲಿಲ್ಲವೆಂದು ಈ ರೀತಿ ಬರೆದದ್ದು.
ಗೆಳತಿ, ಪ್ರೀತಿ ಉದಯಿಸಲು ಸಾವಿರ ಮಾತು ಬೇಡ
ಮನಸ್ಸೆಂಬ ಸಾಗರದಲ್ಲಿ ಮಳೆ ಹನಿಯಂತಹ
ಒಂದು ಸಣ್ಣ ಮಳೆ ಹನಿ ಸಾಕು. ಸದ್ಯಕ್ಕೆ ಇಷ್ಟೆ ಸಾಕು.
ನಿನ್ನ ಉತ್ತರ ಕಂಡು ಮುಂದುವರಿಸುತ್ತೇನೆ.
ನೀನು ಬಯಸುವುದಾದರೆ ನನ್ನವಳಾಗುವೆ.

**ಕೊಳಂಬೆ. ಮಮತ, ಲಕ್ಷ್ಮಣ, ಕಾಟಕೇರಿ.**

**ಅರೆಭಾಷಿಕರು ತನ್ನತನವನ್ನು, ಸ್ವಂತಿಕೆಯನ್ನು ತಪ್ಪದೆ ಉಳಿಸಿಕೊಂಡು ಕೀಳರಿಮೆಯನ್ನು ಹೋಗಲಾಡಿಸಬೇಕು**

## 7ನೇ ವರ್ಷದ ಚಿರಸ್ಮರಣೆ



ಅಂಚೆಮನೆ ನಂಜುಂಡ, ಅಭ್ಯತ್‌ಮಂಗಲ

ಜನನ : 8-11-1942 ಮರಣ : 27-4-1993

ನೀವು ನಮ್ಮನ್ನು ಅಗಲಿ ಇಂದಿಗೆ ಏಳು ವರ್ಷವಾದರೂ ನಿಮ್ಮ ನೆನಪು ಸದಾ ಚಿರನೂತನವಾಗಿಯೇ ಇದೆ. ನಿಮ್ಮ ತ್ಯಾಗ, ಪ್ರೀತಿ, ವಾತ್ಸಲ್ಯಗಳಿಂದ ಕೂಡಿದ ಆದರ್ಶ ಜೀವನ ನಮಗೆ ಮಾರ್ಗದರ್ಶನ. ನಿಮ್ಮ ಜೀವನದ ಆದರ್ಶವನ್ನು ಎಂದೆಂದಿಗೂ ಮರೆಯಲಾರೆವು.

ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ಕೋರುವ,

ಪತ್ನಿ : **ಅಂಚೆಮನೆ ಜಯಮ್ಮ,**
ಮಗ : **ಅಂಚೆಮನೆ ಸುಧಿ,** ಸೊಸೆ : **ನಮಿತ,**
ಅಳಿಯ : **ಕೆ. ವಿ. ಜಗನ್ನಾಥ್,** ಮಗಳು : **ಕೆ. ಜೆ. ಮಮತ,**
ಮೊಮ್ಮಗ : **ಸ್ವಸ್ತಿಕ್,** ಮೊಮ್ಮಗಳು : **ಕೆ. ಜೆ. ಭೂಮಿಕ,** ಅಭ್ಯತ್‌ಮಂಗಲ

## ಸವಿ ನೆನಪು



**ಸೆಟ್ಟೇಜನ ಸುಬ್ಬಯ್ಯ (ರಂಗಸಮುದ್ರ)**

ನೀವು ನಮ್ಮನ್ನಗಲಿ (29-4-94) ಆರ್ ವರ್ಷ ಕಳ್‌ತ್. ಆದರೆ ನಿಮ್ಮ ಆಶೀರ್ವಾದ ನಮಗಳಿಗೆ ಸದಾ ಉಟ್ಟು. ನೀವು ಪಾಲಿಸಿ ಬೋಧಿಸಿದ ಸತ್ಯ, ನ್ಯಾಯ, ಧರ್ಮ, ಮಾನ,ಮರಿಯಾದಿಯೆಂಬ ಸೂತ್ರಗಳ ಮಾರ್ಗದರ್ಶನದಲ್ಲಿ ಮುಂದುವರಿಯುತ್ತ, ನಿಮ್ಮ ಸವಿನೆನಪ್‌ಗ, ಕಿರುನಗೆಯ ಸವಿನುಡಿಗ ನಮ್ಮ ಹೃದಯದಲಿ ಹಚ್ಚ ಹಸಿರಾಗಿಟ್ಟು. ನಿಮ್ಮ ದಿವ್ಯಾತ್ಮಕ್ಕೆ ಭಗವಂತ ಚಿರಶಾಂತಿನ ಕೊಡ್ಲಿತ ಪ್ರಾರ್ಥಿಸಿವೆ.

### ನೆನಪು

ನೋವೆ ಒಂದು ನೆನಪು
ದುಃಖವೆ ಒಂದು ನೆನಪು
ಬಲು ದೂರ ದೂರಹೋದೆಯ, ನಮ್ಮನ್ನಗಲಿ ಪೊಪ್ಪ,
ನೇಸರನ ಬೆಂಬೆಳಕಿನಲಿ ಕಾದರು,
ಶಶಿ, ತಾರೆಯ ಬೆಳದಿಂಗಳು ನೆನದರು
ನಿನ್ನ ಆಗಮನ ನಮಗಿಲ್ಲದಾಯಿತ್ತಲ್ಲ
ಆದೂತ ಕರೆದನೆಂದು
ಕಂದಮ್ಮಗಳ ಕೇಳದೆ ಹೊರಟು ಹೋದೆಯ,
ಹಗಲಿರುಳುಗಳಲ್ಲಿ ಕರುಳ ಕುಡಿಗಳಿಗಾಗಿ,
ಹಂಬಲಿಸಿ ತೊರೆದು ನಗಿಸಿ ನಲಿಸುತ್ತಿದೆ.
ಅಂದು ಆ ದಿನಗಳಲಿ, ಬೆಳೆದ ಬಾಂಧವ್ಯದ
ನೆನಪೊಂದೆ ಉಳಿಯುವಂತೆ ಮಾಡಿದನಲ್ಲ ಸೃಷ್ಟಿಕರ್ತ
ನೀನಿಲ್ಲದೆ ಈ ಜಗದೊಳಗೆ ಬದುಕು ಬರಿ ಕತ್ತಲು ನಮಗೆ

**ರಚನೆ : ಕುಲ್ಲಚನ ತಾರ ರವಿ**

ಹೆಂಣ್ - **ಅಕ್ಕಮ್ಮ,** ಮಗಳ್‌ಂದಿರ್ - **ತಾರ, ಶೈಲ, ಪ್ರಮೀಳ, ಶಶಿ, ಹೇಮಾ,**
ಅಳಿಯಂದಿರ್ - **ರವಿ, ಜಗದೀಶ್,** ಮೊಮ್ಮಗ - **ತುಷಿತ್,** ರಂಗಸಮುದ್ರ (ವಯ) ಕುಶಾಲನಗರ.

107. ಬಹುಮುಖ ವ್ಯಕ್ತಿತ್ವ
108. ಬಡವರ ಬಂಧು
109. ದಿವ್ಯ ಚೇತನ
110. ಅದ್ವಿತೀಯ ವ್ಯವಸ್ಥಾಪಕ
111. ಸಮಯ ಪ್ರಜ್ಞಾವಂತ
112. ಸುಳ್ಯದ ಕಾಮಧೇನು
113. ತಂತ್ರಗಾರ
114. ಮಾನವೀಯ ಸೂತ್ರಧಾರಿ
115. ಧರ್ಮ ರಕ್ಷಾಕರ
116. ಧರ್ಮ ಪ್ರವೀಣ
117. ಛಲದಲ್ಲಿ ಭಗೀರಥನಂತೆ
118. ಕ್ಷಮಾಗುಣದಲ್ಲಿ ಧರಿತ್ರಿಯಂತೆ
119. ಸರಸ್ವತಿ ಕಿಂಕರ
120. ಯೋಜನಾ ಕರ್ತ
121. ರಾಜಯೋಗಿ
122. ಕರ್ತ ಕಾರ್ಯರಾದ ಮಹಾಶಕ್ತಿ
123. ಮಹಾ ಮುತ್ಸದ್ದಿ
124. ಪ್ರತಿಭೆ ಹಾಗೂ ಧೀಮಂತ ವ್ಯಕ್ತಿತ್ವ
125. ವಿಶಾಲ ಹೃದಯಿ
126. ಮಹಾ ಚೈತನ್ಯರೂಪಿ
127. ಪರಿಹಾರ ಕರ್ತ
128. ರಾಷ್ಟ್ರದ ವರಪುತ್ರ
129. ಮಣ್ಣಿನ ಮಗ
130. ಸರ್ವಗುಣ ಸಂಪನ್ನ
131. ಹಮ್ಮನಸಿನ ಒಡೆಯರಾದ 60ಕಲೆಗಳ ಪುರುಷ
132. ನವ್ಯ ಸುಳ್ಯದ ಭವ್ಯ ಶಿಲ್ಪಿ
133. ಸಮರ್ಥ ಆಡಳಿತಗಾರ
134. ಸುಳ್ಯದಸಾಮ್ರಾಟ
135. ಅಕ್ಷಯ ಪಾತ್ರೆಯಂತೆ
136. ಚೈತನ್ಯದ ಚಿಲುಮೆ
137. ವಿವೇಕ ಪುರುಷ
138. ವ್ಯಕ್ತಿಯಲ್ಲಿ ಮಹಾಶಕ್ತಿ
139. ಅಮರ
140. ಶಾಂತಿಪ್ರಿಯ, 20ನೇ ಶತಮಾನ ಮೇರುವ್ಯಕ್ತಿ

KA/SK/MYS-88 10-01-96 TCI Kar. 09592

## ದಿನಾಂಕ 26-12-1988ರಲ್ಲಿ "60" ತುಂಬಿದ ಷಷ್ಟ್ಯಬ್ಧ ಅಭಿನಂದನಾ ಸಮಾರಂಭದ "ಗ್ರಂಥ ಅಮರ"ದಲ್ಲಿ ಸುಳ್ಯದ ಸಾಮ್ರಾಟ ಶ್ರೀ ವೆಂಕಟರಮಣಗೌಡರಿಗೆ ಸಂಭೋದಿಸಿದ 140 ಬಿರುದು ಬಾವಲಿಗಳ ಮಹಾ ಸರಮಾಲೆ

**ಬಿರುದು ಬಾವಲಿಗಳ ಸರದಾರ, ಪಶ್ಚಿಮ ಘಟ್ಟದ ಅರೆಭಾಷಿಕರ ಕಣ್ಮಣಿ, ಶತಮಾನದ ಪುರುಷೋತ್ತಮ ಸುಳ್ಯದ ಶ್ರೀ ವೆಂಕಟರಮಣ ಗೌಡರು.**

1. ಸುಳ್ಯದ ಆಧುನಿಕ ಶಿಲ್ಪಿ
2. ದುಡಿಮೆಯ ಶ್ರೇಷ್ಠ ಪುತ್ರ
3. ಆರ್ಥಿಕ ಸ್ವಾವಲಂಬನೆಯ ಆದರ್ಶ ವ್ಯಕ್ತಿ
4. ಸರಳ ಜೀವನದ ಉತ್ತಮ ವ್ಯಕ್ತಿ
5. ಮಿತ ವ್ಯಯದ ಮಾರ್ಗದರ್ಶಿ
6. ಸೇವಾಕಾಂಕ್ಷಿ ಮಹಾನುಭಾವ
7. ಕೃಷಿ ತಜ್ಞ
8. ಸಪ್ತ ದುಶ್ಚಟಗಳಿಂದ ದೂರವಿರುವ ಮಹಾವ್ಯಕ್ತಿ
9. ಎ. ಪಂಚ ಸೂತ್ರಧಾರಿ
   ಬಿ. ಅಷ್ಟ ಸದ್ಗುಣಗಳ ಜನಕ ಅನುಸ್ಥಾಪಕ
10. ಸುಳ್ಯದ ಭಾಗ್ಯ ಶಿಲ್ಪಿ
11. ಸಮಾಜೋದ್ಧಾರಕ
12. ಶಿಕ್ಷಣ ತಜ್ಞ
13. ದಾನ ವೀರ
14. ಉತ್ತಮ ಆಡಳಿತಗಾರ
15. ಕಟ್ಟಡ ರಚನಾ ಶಿಲ್ಪಿ
16. ಸ್ನೇಹ ಮೂರ್ತಿ
17. ಸರ್ವಮುಖಿ
18. ಸುಳ್ಯದ ಮಹಾನ್ ಚೇತನ
19. ಸುಳ್ಯದ ಮಹಾನ್ ವ್ಯಕ್ತಿ
20. ಕರ್ತವ್ಯ ಪಾಲಕ
21. ಫಲಾನುಭವಿ
22. ಮಹಾನ್ ಶಕ್ತಿ
23. ಕರ್ಮಯೋಗಿ
24. ವಿದ್ಯಾಸಂಸ್ಥೆಗಳ ಸೃಷ್ಟಿಕರ್ತ
25. ಸಜ್ಜನ ಪ್ರೇಮಿ
26. ವಿದ್ಯಾದಾನಿ
27. ತಾಳ್ಮೆಯ ಮೂರ್ತಿ
28. ಸಂಘ ಸಂಸ್ಥೆಗಳ ಜನಕ
29. ದೇವ ಮಾನವ
30. ಸುಳ್ಯದ ಟಿ. ಎಂ. ಎ. ಪೈ.
31. ರಾಷ್ಟ್ರಪ್ರೇಮಿ
32. ಲಕ್ಷ್ಮಿ ಪುತ್ರ
33. ಮುಟ್ಟಿದ್ದು ಚಿನ್ನವಾಗತಕ್ಕ ಮಹಾಪುರುಷ
34. ದಿವ್ಯಾಸ್ತ್ರ ಪರಿಣಿತ
35. ತಾಲ್ಲೂಕು ರಚನಾ ಕರ್ತ
36. ಕೋರ್ಟು ನಿರ್ಮಾಪಕ
37. ವೈದ್ಯಾಲಯ ನಿರ್ಮಾಪಕ
38. ಖಜಾನೆ ನಿರ್ಮಾಪಕ
39. ಕೋಟ್ಯಾಧೀಶ
40. ಯುಗಪುರುಷ
41. ಸಾಧನಾ ಕರ್ತ
42. ಶ್ರದ್ಧಾಗಾರ
43. ಛಲಗಾರ
44. ಆಂಗ್ಲಭಾಷಾಪೋಷಕ
45. ವಿಚಾರವಂತ
46. ಅನುಭವ ಜನಕ
47. ಪವಾಡ ಪುರುಷ
48. ಪ್ರತಿಭಾವಂತ
49. ಸಮಯ ಪ್ರಜ್ಞಾವಂತ
50. ಗಾಂಭೀರ್ಯ ವ್ಯಕ್ತಿ
51. ಉತ್ಸಾಹಿ ಪುರುಷ
52. ಸಮರ್ಥ ಪುರುಷ
53. ನಿಷ್ಠಾವಂತ
54. ಸೂಕ್ಷ್ಮಮತಿ
55. ಧೈರ್ಯವಂತ
56. ಶಿಸ್ತುಪಾಲಕ
57. ಸುಳ್ಯದ ಬ್ರಹ್ಮ
58. ಗ್ರಂಥಾಲಯ ಸೃಷ್ಟಿಕರ್ತ
59. ಸುಳ್ಯದ ಗಾಂಧಿ
60. ಸುಳ್ಯದ ನೆಹರು
61. ಅಷ್ಟ ಭಾಗ್ಯಾಧಿಪತಿ
62. ಹೃದಯ ಶ್ರೀಮಂತಿಗೆಗಾರ
63. ಸುಸಂಸ್ಕೃತ ಪುರುಷ
64. ಶುದ್ಧ ಚಾರಿತ್ರ್ಯಗಾರ
65. ಕೊಡುಗೈ ದಾನಿ
66. ಅಮರ ಶಿಲ್ಪಿ
67. ತ್ಯಾಗಮೂರ್ತಿ
68. ಸಾಧನಾಮೂರ್ತಿ
69. ಸಮಾಜ ಸುಧಾರಣಾ ವ್ಯಕ್ತಿತ್ವ
70. ಧ್ರುವತಾರೆಯಂತೆ
71. ಸರಸ್ವತಿ ಪುತ್ರ
72. ಶ್ರೇಷ್ಠ ಮೂರುತಿ
73. ಮಿತ ಸಂತತಿ ಸೂತ್ರಧಾರ
74. ವೇದ ಮೂರ್ತಿ
75. ಪುರಂದರ ದಾಸರಂತೆ
76. ಬಸವಣ್ಣರಂತೆ
77. ಪರೋಪಕಾರಿ
78. ತಾಂತ್ರಿಕ ಪುರುಷ
79. ಸುಳ್ಯದ ಕುಟೀರ
80. ದೈವ ಸ್ವರೂಪಿ
81. ಪುಣ್ಯಾತ್ಮ
82. ಪ್ರಾಮಾಣಿಕ ಮೂರ್ತಿ
83. ಪವಿತ್ರ ಮೂರ್ತಿ
84. ದೂರದೃಷ್ಟಿವಂತ
85. ಕ್ಷಮಾ ಮೂರ್ತಿ
86. ಹಸನ್ಮುಖಿ
87. ಸತ್ಯಮೂರ್ತಿ
88. ಸಮಗ್ರ ಮೂರ್ತಿ
89. ಧರ್ಮಪಾಲಕ
90. ಕಲೆಗಾರ
91. ಕ್ರಿಯಾ ಪುರುಷ
92. ಆರೋಗ್ಯ ಪುರುಷ
93. ಶ್ರಮ ಜೀವಿ
94. ಪ್ರಾಮಾಣಿಕ ವ್ಯಕ್ತಿತ್ವ
95. ತತ್ವಪುರುಷ
96. ಸುಳ್ಯದ ಭಗೀರಥ
97. 63ರಂತೆ ಮುಖಾಮುಖಿ ಪ್ರೇಮ ದಂಪತಿಗಳು
98. ಮಹಾನ್ ಕನಸುಗಾರ
99. ಸೂರ್ಯನಂತೆ
100. ಕಲ್ಯಾಣ ಪುರುಷ
101. ಕೀರ್ತಿ ಶೇಷ
102. ಕಲ್ಯಾಣ ನಿರತ
103. ಶಿಕ್ಷಣದ ಪಿತಾಮಹ
104. ಕುಟುಂಬ ಕಲ್ಯಾಣ ಕರ್ತ
105. ಆಪತ್ ಬಾಂಧವ
106. ಪರಹಿತ ಚಿಂತಕ

3ನೇ ಪುಟಕ್ಕೆ

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.